

ಅಕಿರ ಕುರಸವನ ಮಹತ್ವದ ಚಲನಚಿತ್ರ

# ಇಕಿರು

ಚಿತ್ರಲೇಖನ




ಹೆಗ್ಗೋಡು ಸಾಗರ ಕರ್ನಾಟಕ

ಜಪಾನಿ ಚಿತ್ರನಿರ್ದೇಶಕ
ಆಕಿರ ಕುರೊಸವನ
ಪ್ರಸಿದ್ಧ ಚಿತ್ರದ
ಚಿತ್ರಕಥೆ

# ಇಕಿರು

ಅನು: ಕೃಷ್ಣ ಹಾಸನ

ನಮ್ಮ ಬಾಳನ್ನು
ತುಂಬಿ
ಮರೆಯಾಗಿ ಹೋದ
**ಅಭಿಜಿತ್**
ನೆನಪಿಗೆ

## ನಾಲ್ಕು ಮಾತು

ಅಕಿರ ಕುರೊಸವ (ಜನ್ಮ: 1910) ಜಗತ್ತಿನ ಮತ್ತು ಜಪಾನಿನ ಶ್ರೇಷ್ಠ ಚಲನಚಿತ್ರ ನಿರ್ದೇಶಕರಲ್ಲಿ ಒಬ್ಬ. ಈತ ಸುಮಾರು ಇಪ್ಪತ್ತೈದಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾನೆ. ಆದರೆ ರಶೋಮೊನ್, ಸೆವೆನ್ ಸಮುರಾಯ್ ಮೊದಲಾದ ಐತಿಹಾಸಿಕ ಚಿತ್ರಗಳು ಪ್ರಸಿದ್ಧವಾಗಿರುವಂತೆ ಅವನ ಸಾಮಾಜಿಕ ಚಿತ್ರಗಳು ಪ್ರಸಿದ್ಧವಾಗಿಲ್ಲ. 'ಇಕಿರು' ಒಂದು ಸಾಮಾಜಿಕ ಚಿತ್ರ (1952). ಇದು ಕುರೊಸವನ ಅತ್ಯುತ್ತಮ ಚಿತ್ರಗಳಲ್ಲೊಂದು. ಇದೇ ಇವನ ಪ್ರಾತಿನಿಧಿಕ ಚಿತ್ರವೆಂದೂ ಭಾವಿಸುವವರಿದ್ದಾರೆ. "ಇಕಿರು ನನಗೆ ಅತ್ಯಂತ ತೃಪ್ತಿ ನೀಡಿದ ಚಿತ್ರ" ಎಂದು ಕುರೊಸವನೇ ಒಂದೆಡೆ ಹೇಳಿಕೊಂಡಿದ್ದಾನೆ.

ಜಪಾನಿ ಭಾಷೆಯಲ್ಲಿ 'ಇಕಿರು' ಎಂದರೆ ಜೀವನ. ಬದುಕು ಎಂದರ್ಥ. ಸಾವಿನ ಮುಖಾಮುಖಿಯಲ್ಲಿ ಮನುಷ್ಯ ಹೇಗೆ ಬದುಕುತ್ತಾನೆ, ಬದುಕು ಯಾವುದು, ಬದುಕಿನ ಉದ್ದೇಶವೇನು, ಬದುಕಿಗೆ ಅರ್ಥವಿರುವುದು ಯಾವುದರಲ್ಲಿ ಇತ್ಯಾದಿ ಪ್ರಶ್ನೆಗಳನ್ನು ಈ ಚಿತ್ರ ನಮ್ಮಲ್ಲಿ ಬಡಿದೆಬ್ಬಿಸುತ್ತದೆ; ಬದುಕಿನ ಸೂಕ್ಷ್ಮ ಚಿಂತನೆಗೆ ನಮ್ಮನ್ನು ತೊಡಗಿಸುತ್ತದೆ. "He who will lose his life should find it" ಎಂಬ ಬೈಬಲಿನ ಹೇಳಿಕೆಯಂತೆ ಇಲ್ಲಿನ ಕಥಾನಾಯಕ ಜೀವನದುದ್ದಕ್ಕೆ 'ಸತ್ತು ಬದುಕಿದ್ದವನು'. ಬದುಕಿಗೆ ಅರ್ಥವಿರುವುದು 'ಕ್ರಿಯೆಯಲ್ಲಿ' ಎಂಬ ಸತ್ಯವನ್ನು ಕಡೆಗಳಿಗೆಯಲ್ಲಿ ಕಂಡುಕೊಂಡು 'ಬದುಕಿ ಸಾಯುತ್ತಾನೆ'.

ಒಂದು ಅತ್ಯುತ್ತಮ ಚಲನಚಿತ್ರ ಒಂದು ಅತ್ಯುತ್ತಮ ಸಾಹಿತ್ಯ ಕೃತಿಯೂ ಹೌದು ಎಂದು ನಾನು ನಂಬಿದ್ದೇನೆ. 'ಇಕಿರು'ವನ್ನು ನಾನು ಸುಮಾರು ಮೂರು ವರ್ಷಗಳ ಹಿಂದೆಯೇ ಅನುವಾದಿಸಿದೆ. ಇದರ ಜೊತೆಗೆ ಜಪಾನಿನ ಇನ್ನೊಬ್ಬ ಪ್ರಸಿದ್ಧ ಚಲನಚಿತ್ರ ನಿರ್ದೇಶಕ ಓಜುನ 'ಟೋಕಿಯೊ ಸ್ಟೋರಿ'ಯನ್ನೂ ಅನುವಾದಿಸಿದೆ. ಇವೆರಡನ್ನೂ ನಾನು "Contemporary Japanese Literature" (Ed: Hibbett Howard, 1978) ಎಂಬ ಗ್ರಂಥವನ್ನು ಆಧರಿಸಿ ಇಂಗ್ಲಿಷ್ ಮೂಲದಿಂದ ಅನುವಾದಿಸಿದ್ದೇನೆ. ಸದ್ಯದಲ್ಲಿ 'ಇಕಿರು' ಪ್ರಕಟವಾಗುತ್ತಿದೆ. ನಾನು ಕೊಟ್ಟ ತೊಂದರೆಗಳನ್ನು ಸಹಿಸಿಕೊಂಡು ಪ್ರೀತಿಯಿಂದ ಪ್ರಕಟಿಸುತ್ತಿರುವ ಅಕ್ಷರ ಪ್ರಕಾಶನಕ್ಕೆ ನನ್ನ ಕೃತಜ್ಞತೆಗಳು.

ಸಂಕ್ರಾಂತಿ, 1987
ಮೈಸೂರು

**ಕೃಷ್ಣ ಹಾಸನ**

## ಇ ಕಿ ರು

ಕಪ್ಪು ಹಿನ್ನೆಲೆಯಲ್ಲಿ ಬಿಳಿ ಶೀರ್ಷಿಕೆಗಳು. ಮಂದಗತಿಯ ಕರುಣಾಜನಕ ಸಂಗೀತ. ಅನಂತರ ಎಕ್ಸ್–ರೇ ನೆಗೆಟಿವ್‌ನ ಕ್ಲೋಸ್‌ಅಪ್ ಕಾಣಿಸುತ್ತಿರುವುದರ ಜೊತೆಗೆ ಅದನ್ನು ವಿವರಿಸುತ್ತಿರುವ ಧ್ವನಿಯೂ ಕೇಳಿಸುವುದು.

ನಿರೂಪಕ (ಅದೃಶ್ಯ) : ಇದೊಂದು ಹೊಟ್ಟೆಯ ಎಕ್ಸ್–ರೇ ಚಿತ್ರ. ಇದು ಈ ಕಥೆಯ ವ್ಯಕ್ತಿಗೆ ಸಂಬಂಧಪಟ್ಟಿದ್ದು. ಕ್ಯಾನ್ಸರ್ ರೋಗದ ಕೆಲವು ಲಕ್ಷಣಗಳಿವೆ, ಆದರೆ ಆ ಬಗ್ಗೆ ಅವನಿಗೆ ಯಾವುದೇ ವಿಷಯ ತಿಳಿದಿಲ್ಲ.

ಮೇಲಿನ ದೃಶ್ಯ ಕ್ರಮೇಣ ಮರೆಯಾಗುತ್ತ ಹೋಗಿ ಈಗ ಸಿಟಿಹಾಲ್‌ನ ದೃಶ್ಯ. ನಾಗರಿಕ ವಿಭಾಗದ ಮುಖ್ಯಸ್ಥನಾದ ವಾಟನಬಿ ಕಂಜಿಯ ಡೆಸ್ಕ್. ಕಾಗದ ಪತ್ರಗಳು ಪೇರಿಸಿರುವ ಡೆಸ್ಕ್‌ನ ಹಿಂಭಾಗದಲ್ಲಿ ಆತ ಕುಳಿತಿರುವನು; ಅನೇಕ ದಾಖಲೆ ಪತ್ರಗಳಿಗೆ ತನ್ನ ಮುದ್ರೆ ಹಾಕುವುದರಲ್ಲಿ ಮುಳುಗಿದ್ದಾನೆ. ಅನಂತರ ಆ ಕೆಲಸ ನಿಲ್ಲಿಸಿ ತನ್ನ ಕೈಗಡಿಯಾರದತ್ತ ನೋಡುವನು.

ಕಛೇರಿಯ ಮುಂಭಾಗದ ದೃಶ್ಯ; ಸುದ್ದಿಸಮಾಚಾರ ವಿಭಾಗ (ಕೌಂಟರ್). ವಿಭಾಗದ ಗುಮಾಸ್ತ ಸಕಾಯಿ ಜೊತೆ ಅನೇಕ ಜನ ಮಹಿಳೆಯರು ಮಾತನಾಡುತ್ತಿರುವರು. ಕೌಂಟರ್ ಮೇಲೊಂದು ಸೂಚನಾಫಲಕವಿದೆ : ಈ ವಿಭಾಗ ನಿಮಗಾಗಿ. ಇದು ಸಿಟಿ ಹಾಲ್ ಮತ್ತು ನಿಮ್ಮ ನಡುವಣ ಸೇತುವೆ. ನಾವು ಮನವಿ ಹಾಗೂ ದೂರುಗಳನ್ನು ಸ್ವಾಗತಿಸುತ್ತೇವೆ.

ಹೆಂಗಸು : ಮತ್ತೆ ನನ್ನ ಮಗೂಗೆ ಆ ನೀರಿನಿಂದಾಗಿ ಮೈಮೇಲೆ ಬೊಕ್ಕೆ ಎದ್ದಿದೆ. ಜೊತೆಗೆ ದುರ್ನಾತ ಬೇರೆ...ಅಲ್ಲಿ ಲಕ್ಷಾಂತರ ಸೊಳ್ಳೆಗಳಿವೆ...ನೀವೇತಕ್ಕೆ ಆ ಸ್ಥಳದ ಬಗ್ಗೆ ಏನಾದರೂ ವ್ಯವಸ್ಥೆ ಮಾಡಬಾರದು ? ಅದೊಂದು ಒಳ್ಳೇ ಆಟದ ಮೈದಾನ ಆಗುತ್ತೆ.

ಸಕಾಯಿ ಅವರ ಕ್ಷಮೆ ಕೋರಿ ವಾಟನಬಿಯ ಡೆಸ್ಕ್ ಬಳಿಗೆ ಹೋಗಿ ಕುರೋ–ಚೋ ದಿಂದ ಕೆಲವು ಅರ್ಜಿದಾರರು ಬಂದಿರುವ ವಿಷಯನ್ನು ತಿಳಿಸುವನು. ಅವರನ್ನು ಲೋಕೋಪಯೋಗಿ ವಿಭಾಗಕ್ಕೆ ಕಳುಹಿಸಲು ಆತನಿಗೆ ಹೇಳಿ ವಾಟನಬಿ ಪುನಃ ತನ್ನ ಕೈಗಡಿಯಾರ ನೋಡಿಕೊಳ್ಳುವನು.

ನಿರೂಪಕ (ಅದೃಶ್ಯ) : ಈತ ನಮ್ಮ ಕಥೆಯ ಮುಖ್ಯ ಪಾತ್ರಧಾರಿ. ಆದರೆ ಈತನಲ್ಲಿ ಅಂಥ ಸ್ವಾರಸ್ಯ ಕಾಣುತ್ತಿಲ್ಲ. ಈತ ಸುಮ್ಮನೆ ಸಮಯಾನ ಕಳೀತಿದ್ದಾನೆ. ನಿಜ ಹೇಳಬೇಕೆಂದ್ರೆ ಸಮಯವನ್ನೆಲ್ಲ ವ್ಯರ್ಥ ಮಾಡ್ತಿದಾನೆ. ಈತ ಬದುಕಿದ್ದಾನೆ ಅಂತ ಹೇಳೋದು ನಿಜಕ್ಕೂ ಬಹಳ ಕಷ್ಟ.

ಇದ್ದಕ್ಕಿದ್ದಂತೆ ನಗುವಿನ ಧ್ವನಿ ಬಂದ ದಿಕ್ಕಿಗೆ ವಾಟನಬಿ ನೋಡುವನು. ಈಗ ಆಫೀಸ್ ದೃಶ್ಯ ; ಕೆಲಸದಾಕೆ ಟೊಯೊ ಇದ್ದಕ್ಕಿದ್ದಂತೆ ಜೋರಾಗಿ ನಕ್ಕಿದ್ದನ್ನು ಆಫೀಸಿನವರೆಲ್ಲ ನೋಡುತ್ತಿರುವರು. ಸಹಾಯಕ ಮುಖ್ಯಾಧಿಕಾರಿ ಒನೊ, ಕೆಲಸದ ವೇಳೆಯಲ್ಲಿ ಸ್ವಲ್ಪ ಮರ್ಯಾದೆಯಿಂದ ವರ್ತಿಸುವಂತೆ ಆಕೆಗೆ ನಿಷ್ಠುರವಾಗಿ ಹೇಳುತ್ತಿರುವನು.

ಈಗ ವಾಟನಬಿ ತನ್ನ ಕನ್ನಡಕ ತೆಗೆದಿರಿಸುತ್ತಿರುವ ದೃಶ್ಯ.

ಟೊಯೊ : ಆದರೆ ಅದು ತಮಾಷೆಯಾಗಿತ್ತು.
ಒನೊ : ಏನದು ?
ಟೊಯೊ : ಅದೇ ಒಂದು ಹಾಸ್ಯ ಚಟಾಕಿ. ಹೀಗೆ ಸುತ್ತಾಕ್ತಿದೆ.
ಒನೊ : ಹಾಗಿದ್ರೆ ಓದು ಅದನ್ನ.

ಟೊಯೊ ನಿಂತಿರುವಳು: ಓದಲು ಸಂಕೋಚಪಡುತ್ತಿರುವಳು, ಅನಂತರ ದಿನಪತ್ರಿಕೆಯಿಂದ ಕತ್ತರಿಸಿದ ಕಾಗದದ ತುಂಡೊಂದನ್ನು ಕೈಯಲ್ಲಿ ಹಿಡಿದು ಓದ ತೊಡಗುವಳು.

ಟೊಯೊ : (ಓದುತ್ತಿರುವಳು) "ನೀನು ಒಂದೇ ಒಂದು ದಿನವಾದರೂ ರಜಾಹಾಕಿದ್ದೀಯೇನು" "ಇಲ್ಲ" "ಯಾಕೆ ? ನೀನಿಲ್ಲದಿದ್ದರೆ ಕೆಲಸಗಳೇ ನಡೆಯೋಲ್ವಾ ?" "ಹಾಗಲ್ಲ, ನಾನಿಲ್ಲದೇನೊ ಅವರು ಕೆಲಸವನ್ನು ನಿಭಾಯಿಸಬಲ್ಲರೆಂಬುದನ್ನು ಕಂಡು ಕೊಳ್ಳೋಕೆ ನನಗಿಷ್ಟವಿಲ್ಲ.

ಆಕೆ ನಗುವಳು, ಆದರೆ ಇನ್ನಾರೂ ನಗುವುದಿಲ್ಲ.

ವಾಟನಬಿ ಇದೆಲ್ಲವನ್ನು ಕೇಳಿಸಿಕೊಳ್ಳುತ್ತಿರುವ ದೃಶ್ಯ. ಆತ ಮತ್ತೆ ಕನ್ನಡಕ ಏರಿಸಿ, ದಾಖಲೆಪತ್ರಗಳಿಗೆ ಮುದ್ರೆಯೊತ್ತ ತೊಡಗುವನು.

ನಿರೂಪಕ (ಅದೃಶ್ಯ) : ಈ ಅವಸ್ಥೆ ನಿಜಕ್ಕೂ ಶೋಚನೀಯ. ಇವನೊಬ್ಬ ಜೀವಂತ ಹೆಣ ! ಈತ ಸತ್ತು ಈಗಾಗಲೇ ಇಪ್ಪತ್ತೈದು ವರ್ಷಗಳು

ಕಳೆದುಹೋಗಿವೆ. ಮೊದಮೊದಲು ಇವನಲ್ಲೂ ಸ್ವಲ್ಪ ಜೀವಂತಿಕೆ, ಲವಲವಿಕೆ ಇತ್ತು. ಈತ ಕೆಲಸ ಮಾಡಬೇಕು ಅಂತ ಕೂಡ ಪ್ರಯತ್ನಿಸಿದ್ದ.

ಮೊಹರನ್ನು ಒರೆಸಲು ಚೂರು ಕಾಗದಕ್ಕಾಗಿ ವಾಟನಬಿ ಆಕಡೆ ಈಕಡೆ ಹುಡುಕುವನು. ಹಳೆಯ ದಾಖಲೆ ಪತ್ರಗಳು ತುಂಬಿರುವ ಡೆಸ್ಕ್‌ನ ಡ್ರಾರ್ ಹೊರಗೆಳೆಯುವನು. ಫೈಲೊಂದರ ಮೇಲುಪುಟದಲ್ಲಿ "ಕಛೇರಿಯ ಕಾರ್ಯದಕ್ಷತೆಯನ್ನು ಹೆಚ್ಚಿಸುವ ಒಂದು ಯೋಜನೆ" ಎಂದು ಬರೆದಿದೆ. ಆತ ಅದರ ಮೊದಲ ಪುಟವನ್ನು ಹರಿದು, ಅದರಿಂದ ಮೊಹರನ್ನು ಒರಸಿ, ಅನಂತರ ಆ ಕಾಗದವನ್ನು ಕಸದಬುಟ್ಟಿಗೆ ಎಸೆಯುವನು. ಆತ ಪುನಃ ಮೊಹರನ್ನು ಒತ್ತ ತೊಡಗಿದಂತೆ ಹಿನ್ನೆಲೆಯಲ್ಲಿ ನಿರೂಪಕನ ನಿರೂಪಣೆ ಸಾಗುವುದು.

ನಿರೂಪಕ : ಆದರೆ, ಈಗ ಈತ ಪ್ರಯತ್ನಿಸುವುದೂ ಇಲ್ಲ. ಇವನಿಗೆ ಅದು ಬೇಕಾಗಿಯೂ ಇಲ್ಲ. ಇವನ ಆಕಾಂಕ್ಷೆಗಳನ್ನೆಲ್ಲ ಸಿಟಿಹಾಲ್ ಆದು ಮಿಟ್ಟು ಬಿಟ್ಟಿದೆ. ಆದರೂ ಈತನಿಗೆ ಕೈತುಂಬ ಕೆಲಸ. ಅಂದ್ಹಾಗೆ ಈತ ಬಿಜಿ ಮನುಷ್ಯ. ಆದರೂ ಈತನಿಂದ ಏನು ಕೆಲಸವೂ ಆಗ್ತಿಲ್ಲ. ಹಾನೆಲ್ಲಿದ್ದಾನೋ ಅಲ್ಲೇ ಇರೋದಿಕ್ಕೆ ಈತ ಸದಾ ಬಿಜಿಯಾಗಿರ್ತಾನೆ. ಇರಬೇಕಾದ ರೀತೀನಾ ಇದು ?

ವಾಟನಬಿ ಏನೋ ಅಸ್ವಸ್ಥನಾದವನಂತೆ ಕಾಣಿಸುವನು. ಆತ ಕೆಲವು ಮಾತ್ರೆ ನುಂಗಿ ಸ್ವಲ್ಪ ನೀರು ಕುಡಿಯುವನು.

ನಿರೂಪಕ (ಅದೃಶ್ಯ) : ಈತ ಏನಾದರೂ ಸ್ವಲ್ಪ ಗಂಭೀರವಾಗಿ ಯೋಚಿಸೋದಕ್ಕೆ ಮೊದಲು ಇವನ ಹೊಟ್ಟೆ ಸಂಪೂರ್ಣವಾಗಿ ಹಾಳಾಗಬೇಕು ; ನಿಷ್ಪ್ರಯೋಜಕ ಗಂಟೆಗಳು ಸಂಚಯನವಾಗಬೇಕು.

ಕುರೊ-ಚೋ ಮಹಿಳೆಯರು ಲೋಕೋಪಯೋಗಿ ವಿಭಾಗಕ್ಕೆ ಬರುತ್ತಿರುವ ದೃಶ್ಯ ; ಆ ವಿಭಾಗದ, ಸಂಬಂಧಪಟ್ಟ ಗುಮಾಸ್ತ ಪ್ರಸ್ತುತ ವಿಷಯ ಉದ್ಯಾನ ವಿಭಾಗ ಪ್ರಾಧಿಕಾರದವರಿಗೆ ಸಂಬಂಧಿಸಿದೆಂದು ವಿನಯದಿಂದ ವಿನಂತಿಮಾಡುತ್ತಿರುವನು. ಉದ್ಯೋಗ ವಿಭಾಗದ ದೃಶ್ಯ ; ಅಲ್ಲಿನ ಗುಮಾಸ್ತ ಈ ವಿಷಯ ನೈರ್ಮಲ್ಯ ವಿಭಾಗಕ್ಕೆ ಸಂಬಂಧಪಟ್ಟಿದ್ದಿರಬಹುದೆಂದು ಅವರಿಗೆ ಹೇಳಿ ಅವರು ಆರೋಗ್ಯ ಕೇಂದ್ರಕ್ಕೆ ಹೋಗುವುದು ಉತ್ತಮವೆನ್ನುತ್ತಿರುವನು. ಆರೋಗ್ಯ ಕೇಂದ್ರದ ದೃಶ್ಯ ; ಅಲ್ಲಿ ಅವರಿಗೆ ಸಂಬಂಧಪಟ್ಟ ವಿಷಯವನ್ನು ನೈರ್ಮಲ್ಯ ವಿಭಾಗ ಗಮನಿಸುವುದೆಂಬ ಉತ್ತರ ದೊರೆಯುವುದು. ಈ ದೃಶ್ಯಗಳು ಕಾಣುವಾಗ ಸಂಗೀತದ ಹಿನ್ನೆಲೆ ಇದೆ. ನೈರ್ಮಲ್ಯ

ವಿಭಾಗದ ದೃಶ್ಯ; ಅಲ್ಲಿ ಅವರಿಗೆ ಪರಿಸರ ಆರೋಗ್ಯ ವಿಭಾಗಕ್ಕೆ ಹೋಗುವಂತೆ ತಿಳಿಸಲಾಗುತ್ತಿದೆ. ಪರಿಸರ ಆರೋಗ್ಯ ವಿಭಾಗದ ದೃಶ್ಯ; ಅಲ್ಲಿ ಅವರಿಗೆ ಸಾಂಕ್ರಾಮಿಕ ರೋಗ ನಿರೋಧ ಇಲಾಖೆಗೆ ಹೋಗುವಂತೆ ತಿಳಿಸಲಾಗುತ್ತಿದೆ. ಸಾಂಕ್ರಾಮಿಕ ರೋಗ ನಿರೋಧ ಇಲಾಖೆ ದೃಶ್ಯ; ಅಲ್ಲಿನ ಗುಮಾಸ್ತ ಸೊಳ್ಳೆಯ ವಿಷಯ ಪ್ರಸ್ತಾಪಕ್ಕೆ ಬಂದುದರಿಂದ ಅವರು ಕೀಟ ನಿರೋಧ ವಿಭಾಗಕ್ಕೆ ಹೋಗುವಂತೆ ನಿರ್ದೇಶನ ನೀಡುತ್ತಿದ್ದಾನೆ. ಕೀಟ ನಿರೋಧ ವಿಭಾಗ ದೃಶ್ಯ; ಅಲ್ಲಿನ ಗುಮಾಸ್ತ ಅವರಿಗೆ ಒಳಚರಂಡಿ ವಿಭಾಗಕ್ಕೆ ಹೋಗುವಂತೆ ಹೇಳುವ ಮುನ್ನ ಸೊಳ್ಳೆಯೊಂದನ್ನು ಹೊಡೆಯುತ್ತಿರುವನು. ಒಳಚರಂಡಿ ವಿಭಾಗದ ದೃಶ್ಯ; 'ರಸ್ತೆಯೊಂದು ಆ ಪ್ರದೇಶದಲ್ಲಿ ಹಾದುಹೋಗುವವರೆಗೂ ಸಂಬಂಧಪಟ್ಟ ಜಾಗ ಒಳಚರಂಡಿ ವಿಭಾಗದ ಅಧೀನದಲ್ಲಿಯೇ ಇತ್ತು. ಈಗ ರಸ್ತೆ ವಿಭಾಗದ ಒಪ್ಪಿಗೆ ದೊರೆಯದ ಹೊರತು ನಾವೇನೂ ಮಾಡುವಂತಿಲ್ಲ' ಎಂದು ಅಲ್ಲಿನ ಗುಮಾಸ್ತ ಹೇಳುತ್ತಿರುವನು. ರಸ್ತೆವಿಭಾಗದ ದೃಶ್ಯ; ನಗರ ಯೋಜನಾ ಇಲಾಖೆಯ ನಿಯಮಗಳಿನ್ನೂ ಊರ್ಜಿತವಾಗದೇ ಇರುವುದರಿಂದ ಅವರು ಮೊದಲು ಅಲ್ಲಿಗೆ ಹೋಗುವಂತೆ ನಿರ್ದೇಶನ ದೊರೆಯುವುದು. ನಗರ ಯೋಜನಾ ಇಲಾಖೆಯ ದೃಶ್ಯ; ನೀರಿನ ಕೊರತೆಯಿಂದಾಗಿ ಆ ಸ್ಥಳವನ್ನು ಅಗ್ನಿಶಾಮಕ ಇಲಾಖೆ ತನ್ನ ವಶಕ್ಕೆ ಒಪ್ಪಿಸುವಂತೆ ಮರುಮನವಿ ಹಾಕಿಕೊಂಡಿದ್ದುದರಿಂದ ಅಲ್ಲಿಗೆ ಹೋಗುವುದು ಸೂಕ್ತವೆಂಬ ನಿರ್ದೇಶನ ಅಲ್ಲಿ ದೊರೆಯುವುದು. ಅಗ್ನಿಶಾಮಕ ಇಲಾಖೆ; ಅಲ್ಲಿನ ಗುಮಾಸ್ತ 'ನಮಗೆ ಕೊಳಚೆ ನೀರು ಬೇಕಾಗಿಲ್ಲ, ಆ ನೀರಿನಿಂದ ನಮ್ಮ ಉಡುಪು ಹಾಳಾಗುತ್ತೆ. ಅಲ್ಲಿ ಈಜುಕೊಳದ ಥರದ್ದೇನಾದರೂ ವ್ಯವಸ್ಥೆಯಾದರೆ ಆಗ ಅಗ್ನಿಶಾಮಕದಳ ಆ ಬಗ್ಗೆ ಆಸಕ್ತಿ ವಹಿಸಬಹುದು' ಎಂದು ಹೇಳುವನು. ಈಗ ಶಿಕ್ಷಣ ಇಲಾಖೆಯ ಶಿಶು ಕಲ್ಯಾಣಾಧಿಕಾರಿ ಮಾತನಾಡುತ್ತಿರುವ ದೃಶ್ಯ; ಇಂಥ ಬೃಹತ್ ಸಮಸ್ಯೆಗಳನ್ನು ಸಿಟಿ ಕೌನ್ಸಿಲರ್ ಪರಿಹರಿಸಬೇಕು. ನಾನೇ ಸ್ವತಃ ಈ ಬಗ್ಗೆ ಉಪಮೇಯರ್‌ಗೆ ನಿವೇದಿಸುವೆನೆಂದು ಹೇಳುತ್ತಿರುವನು. ಉಪಮೇಯರ್ ಕಛೇರಿಯ ದೃಶ್ಯ; "ನಾಗರಿಕರು ಇಂಥ ಸಲಹೆಗಳನ್ನು ತಾವೇ ಖುದ್ದು ಕೊಡುತ್ತಿರುವುದು ತುಂಬ ಸಂತೋಷದ ವಿಷಯ. ಇಂಥ ಸಲಹೆಗಳನ್ನು ಸ್ವೀಕರಿಸುವ ಸಲುವಾಗಿಯೇ ನಾಗರಿಕ ವಿಭಾಗವನ್ನು ತೆರೆಯಲಾಗಿದೆ" ಎಂದು ಹೇಳುತ್ತಿರುವನು. ಈಗ ಮತ್ತೆ ನಾಗರಿಕ ವಿಭಾಗದ ದೃಶ್ಯ; ಸಕಾಯಿ ಪುನಃ ಕೌಂಟರಿನಲ್ಲಿದ್ದಾನೆ. ಅವನಿಗೆ ಈಗ ಪುನಃ ಬಂದಿರುವವರ ನೆನಪಿಲ್ಲ. ಬಂದವರಿಗೆ ಯಥಾಪ್ರಕಾರ ಲೋಕೋಪಯೋಗಿ ವಿಭಾಗಕ್ಕೆ ಹೋಗುವಂತೆ ಹೇಳುತ್ತಿರುವನು. ಮಹಿಳೆಯರು ಸಿಟ್ಟಿಗೇಳುವರು.

ಮಹಿಳೆಯರು : ನಾವೇನಂತ ತಿಳಕೊಂಡಿದ್ದೀಯಾ ? ಇಲ್ಲಿ ಇರೋ ಸೂಚನಾ ಫಲಕದ ಅರ್ಥ ಏನು ? ಇದು ನಿಮ್ಮ ವಿಭಾಗದ ಜವಾಬ್ದಾರಿ

ಯಲ್ಲವಾ ? ನೀನೇನೂ ಯೋಚನೆ ಮಾಡ್ಬೇಡ, ಮತ್ತೆ ನಾವು ನಿನಗೆ ತೊಂದ್ರೆ ಕೊಡೋದಿಲ್ಲ.

ಅವರು ಕಛೇರಿಯ ಒಳನುಗ್ಗಲು ಅನುವಾಗುವರು. ಒಂದು ನಿಮಿಷ ಹಿಂದು ಮುಂದು ನೋಡಿ ಆತ ಅವರ ಹಿಂದೆ ಓಡುವನು ; ಅವರನ್ನು ಬಾಗಿಲಲ್ಲಿ ತಡೆಯುವನು.

ಸಕಾಯಿ : ದಯವಿಟ್ಟು ಒಂದ್ ನಿಮಿಷ ಇರಿ. ನಾನು ಅಸಹಾಯಕ. ಅಲ್ಲದೆ, ನಮ್ಮ ವಿಭಾಗದ ಮುಖ್ಯಸ್ಥರು ಈವೊತ್ತು ಎಲ್ಲೋ ಹೋಗಿದ್ದಾರೆ. ಸಾಧ್ಯವಾದರೆ ನೀವು ಒಂದು ಲಿಖಿತ ದೂರು ಕೊಟ್ಹೋಗಿ.

ಮಹಿಳೆಯರು ಹೋಗುವುದನ್ನು ಕಛೇರಿಯ ಎಲ್ಲ ನೌಕರರೂ ನಿಂತು ನೋಡುತ್ತಿರುವರು. ಸರ್ರನೆ ವಾಟನಬಿಯ ಖಾಲಿ ಡೆಸ್ಕ್ ಚಿತ್ರ. ಈಗ ಕಛೇರಿ ದೃಶ್ಯ. ಸಹೋದ್ಯೋಗಿಗಳಿಬ್ಬರು ಮಧ್ಯಾಹ್ನದ ತಿಂಡಿ ತಿಂದು, ಕಾಫಿ ಕುಡಿಯುತ್ತ ಸಂಭಾಷಣೆಯಲ್ಲಿ ತೊಡಗಿರುವರು ; ಅವರು ಕ್ಯಾಮರಾಕ್ಕೆ ಬೆನ್ನು ಮಾಡಿರುವರು.

ಒನೊ : : ಅವರು ಹೊರಗಡೆ ಹೋದವರೇ ಅಲ್ಲ. ಇದು ನಿಜಕ್ಕೂ ವಿಚಿತ್ರ ಅನ್ಸುತ್ತೆ.

ಸಾಯಿಟೊ : ಹೌದು, ಆದ್ರೆ ಅವರು ಹೊರಗಡೆ ಬಹಳ ಹೊತ್ತು ಇರೋದು ಅಷ್ಟೊಂದು ಚನ್ನಾಗಿ ಕಾಣ್ಸೊಲ್ಲ.

ಒನೊ : ಒಳ್ಳೆ ತಮಾಷೆಯಾಗಿದೆ ; ಅವರು ಯಾವತ್ತೂ ನೆಗಡಿಗೆ ಕೂಡ ಅನಾರೋಗ್ಯ ನಿಮಿತ್ತ ರಜೆ ತಗೊಂಡಿಲ್ಲ. ಜೊತೆಗೆ, ನನಗೆ ಅವರ ಮೊಹರು ಬೇಕಾಗಿದೆ.

ಕಛೇರಿಯ ಇನ್ನಿಬ್ಬರು ಸಹೋದ್ಯೋಗಿಗಳು ಒಂದೆಡೆ ಮಾತನಾಡುತ್ತ ತಿಂಡಿ ತಿನ್ನುತ್ತಿರುವರು.

ಕಿಮುರ : ಆದ್ರೂ ಇದು ತುಂಬ ಕೆಟ್ಟದು ಅನ್ನಿಸ್ತದೆ. ಇನ್ನೊಂದು ತಿಂಗಳು ಕಳೆದ್ರೆ ಮೂವತ್ತು ವರ್ಷ ಮುಗಿಯುತ್ತೆ, ಅವರು ಒಂದು ದಿನ ಕೂಡ ರಜಾ ತಗೊಂಡವರಲ್ಲ.

ಒಹಾರ : ನಿಜ, ನೀನು ಹಾಗೇ ಗಮನಿಸು. ಅವರು ಹೀಗೆ ಹೊರಗಡೆ ಹೋದಾಗ ಕೆಲವು ಜನ ತುಂಬ ಸಂತೋಷಪಡ್ತಾರೆ. ಅಂದ್ಹಾಗೆ, ಪ್ರಪಂಚದಲ್ಲಿ ಎಲ್ಲರೂ ತಾವು ಮಾತ್ರ ಪಾರಾಗೋದನ್ನ ಬಯಸ್ತಾರೆ.

ಕಛೇರಿಯ ಇನ್ನೊಂದು ಭಾಗದ ದೃಶ್ಯ. ಅಲ್ಲಿ ಅವರು ಕೂಡ ತಿಂಡಿ ತಿನ್ನುತ್ತಿರುವರು.

ಸಕಾಯಿ : ಅವರು ಸದಾ ಏನೋ ಔಷಧಿ ತಗೋತಿರ್‍ತಾರಲ್ಲ, ಅದೇನು ಔಷಧಿ ಅಂತಾ ಆಶ್ಚರ್ಯವಾಗುತ್ತೆ.

ಟೊಯೊ : ಅದೇ ಏನೋ ಹೊಟ್ಟೆ ನೋವಿಗೆ ; ಮತ್ತೆ, ಈಚೀಚೆಗೆ ಅವರು ಮಧ್ಯಾಹ್ನದ ಹೊತ್ತು ತಿಂಡಿ ತಿಂತಾನೇ ಇಲ್ಲ.

ನೊಗೂಚಿ : ಅದು ಇನ್ನೊಂದು ದಾಖಲೆ. ಆತ ಏನನ್ನೇ ಆಗ್ಲಿ ತಿಂದಿದ್ದನ್ನು ನಾನು ನೋಡೇ ಇಲ್ಲ.

ಸಕಾಯಿ : ನಮ್ಮ ಹೊಸ ಅಧಿಕಾರಿ ಯಾರಾಗ್ತಾರೆ ಅಂತಾ ನನ್ಗೆ ಕುತೂಹಲ.

ಟೊಯೊ : ಏನಂತಾ ಆತುರ ? ಅದಕ್ಕಿನ್ನೂ ಬಹಳದಿನ ಹೋಗ್ಬೇಕು.

ಸಹಾಯಕ ಮುಖ್ಯಾಧಿಕಾರಿ ಒನೊ ಮತ್ತು ಸಯಿಟೊ ಈ ಇಬ್ಬರ ದೂರ ದೃಶ್ಯ. ಅವರಿಬ್ಬರೂ ಟೊಯೊನ ಉತ್ತರ ಕೇಳಿಸಿಕೊಂಡು, ಆಶ್ಚರ್ಯಚಕಿತರಾಗಿ ನೋಡುವರು. ವಾಟನಬಿಯ ಖಾಲಿ ಡೆಸ್ಕಿನ ನೋಟ.

ಈ ವಾಟನಬಿ ಆಸ್ಪತ್ರೆಯ ಕಾರಿಡಾರಿನಲ್ಲಿ ನಡೆದು ಬರುತ್ತಿರುವ ದೃಶ್ಯ. ಆ ಚಿತ್ರ ಕ್ರಮೇಣ ಮರೆಯಾಗಿ ಹೋಗಿ ಈಗ ವಾಟನಬಿ ನಿರೀಕ್ಷಣಾ ಕೋಣೆಯಲ್ಲಿ, ಆಸ್ಪತ್ರೆಯ ಕುಡಿಯುವ ನೀರಿನ ನಲ್ಲಿಯ ಬಳಿ ಇರುವನು. ವಾಟನಬಿ ಇನ್ನೇನು ನೀರು ಕುಡಿಯಬೇಕೆನ್ನುವಷ್ಟರಲ್ಲಿ ಇನ್ನೊಬ್ಬ ವ್ಯಕ್ತಿ ಅವನಿಗಿಂತ ಮುಂಚೆ ಅಲ್ಲಿಗೆ ಹೋಗುವನು. ವಾಟನಬಿ ಕಾಯುವನು, ಅನಂತರ ನೀರು ಕುಡಿಯುವನು, ಅನಂತರ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುವನು.

ವಾಟನಬಿ ಈಗ ಕುಳಿತಿರುವನು. ಅವನಿಗೆ ಸ್ವಲ್ಪ ದೂರದಲ್ಲಿ ಕುಳಿತಿದ್ದ ಇನ್ನೊಬ್ಬ ವ್ಯಕ್ತಿ ಅವನ ಪಕ್ಕದ ಕುರ್ಚಿಗೆ ಬಂದು ಕುಳಿತುಕೊಳ್ಳುವನು.

ವ್ಯಕ್ತಿ : ಹೊಟ್ಟೆಯ ತೊಂದ್ರೇನಾ ? ನನಗೂ ಹೊಟ್ಟೆಯ ತೊಂದ್ರೆ ಬಹಳ ದಿನಗಳಿಂದಿದೆ. ಇತ್ತೀಚೆಗೆ ನನ್ಗೆ ಹೊಟ್ಟೆನೋವಾಗದಿದ್ರೆ ಸಮಾಧಾನವೇ ಅನ್ನೊಲ್ಲ.

ನರ್ಸ್ ಯಾವುದೋ ಹೆಸರೊಂದನ್ನು ಕೂಗುವಳು : ವಾಟನಬಿಗೂ ಮೊದಲು ನೀರು ಕುಡಿದ ವ್ಯಕ್ತಿ ಎದ್ದು ಒಳಗೆ ಹೋಗುವನು.

ವ್ಯಕ್ತಿ : ಈಗ ಅಲ್ಲಿದ್ನಲ್ಲ ಆ ವ್ಯಕ್ತಿ. ಡಾಕ್ಟರು ಹೇಳ್ತಾರೆ, ಇದು ಹುಣ್ಣಂತ. ಆದ್ರೆ ನನಗನ್ಸುತ್ತೆ ಅದು ಕ್ಯಾನ್ಸರ್ ಅಂತ. ಮತ್ತೆ ಕ್ಯಾನ್ಸರಂದ್ರೆ ಇನ್ನೇನು, ಮರಣ ದಂಡನೇನೆ. ಇಲ್ಲಿನ ಡಾಕ್ಟರುಗಳು ಯಾವಾಗಲೂ ಹೇಳೋದೇ ಹೀಗೆ—ಇದು ಹುಣ್ಣು, ಇದಕ್ಕೆ ಆಪರೇಷನ್ ಬೇಕಿಲ್ಲ ಅಂತ. ಅವರು ನಿನಗೆ ಹೇಳ್ತಾರೆ— ಹೋಗಿ ನಿಮಗೇನೂ ಆಗಿಲ್ಲ, ಏನ್ಬೇಕಾದ್ರೂ ತಿನ್ನಿ ಅಂತ. ನೀನು ಈ

ಮಾತುಗಳನ್ನು ಕೇಳ್ದ ಅಂದ್ರೆ ನಿನ್ನ ಆಯುಸ್ಸು ಅಮ್ಮಮ್ಮಾ ಅಂದ್ರೆ ಇನ್ನು ಒಂದು ವರ್ಷ ಮಾತ್ರ ಅಂಥ ಅರ್ಥ. ನಿನ್ಗೆ ಸದಾ ಹೊಟ್ಟೆ ಭಾರ ಅನ್ಸುತ್ತೆ, ಹೊಟ್ಟೆ ನೋವಾಗುತ್ತೆ, ಬಹಳ ತೇಗ್ತೀಯಾ, ಸದಾ ಬಾಯಾರಿಕೆ ಅನ್ಸುತ್ತೆ, ನಿನ್ಗೆ ಭೇದಿಯಾಗುತ್ತೆ ಇಲ್ಲ ಹೊಟ್ಟೆ ಕಟ್ಟಿರುತ್ತೆ—ಈ ಎರಡೂ ಸಂದರ್ಭಗಳಲ್ಲಿ ನಿನ್ನ ಮಲ ಯಾವಾಗ಼್ೂ ಕಪ್ಪಗಿರುತ್ತೆ.

ವಾಟನಬಿ ಹೆಚ್ಚೆಚ್ಚು ಅಸ್ವಸ್ಥನಾಗುತ್ತಿರುವನು; ಮೌನ; ಅಶುಭಸೂಚಕ ಸಂಗೀತ. ವಾಟನಬಿ ಜಾಗ ಬದಲಾಯಿಸುವನು: ಆದರೆ ವ್ಯಕ್ತಿ ಅವನನ್ನು ಹಿಂಬಾಲಿಸುವನು. ವಾಟನಬಿ ತೀರ ಅಸ್ವಸ್ಥನಾಗುತ್ತಿರುವುದರ ದೃಶ್ಯ.

ವ್ಯಕ್ತಿ : ಮತ್ತೆ, ನಿನ್ಗೆ ಮಾಂಸ ತಿನ್ನೋದಿಕ್ಕೆ ಸಾಧ್ಯವಾಗಲ್ಲ; ಅಥವಾ ನಿನ್ಗೆ ಇಷ್ಟವಾದದ್ದೇನನ್ನೂ ತಿನ್ನೋದಿಕ್ಕೂ ಆಗಲ್ಲ; ಅನಂತರ ವಾರದ ಹಿಂದೆ ತಿಂದದ್ದನ್ನೂ ನೀನು ವಾಂತಿ ಮಾಡ್ಕೊತೀಯ, ಆಮೇಲೇನಾಗುತ್ತೆ, ನಿನ್ನ ಆಯುಸ್ಸು ಇನ್ನು ಕೇವಲ ಮೂರು ತಿಂಗಳು ಮಾತ್ರ ಉಳಿದಿರುತ್ತೆ!

ವಾಟನಬಿ ನಿರೀಕ್ಷಣಾ ಕೋಣೆಯಲ್ಲಿ ಒಬ್ಬೊಂಟಿ ಕುಳಿತಿರುವ ದೂರದೃಶ್ಯ. ಮಂದಗತಿಯ ಕರುಣಾಜನಕ ಸಂಗೀತ ಕೇಳಿಸುವುದು. ನಿರೀಕ್ಷಣಾ ಕೋಣೆಯಲ್ಲಿ ಆತ ಎಲ್ಲೋ ಕರಗಿಹೋದಂತೆ ಕಾಣಿಸುವ ದೂರದೃಶ್ಯ. ಇದ್ದಕ್ಕಿದ್ದಂತೆ ನರ್ಸ್ ಅವನ ಹೆಸರು ಕೂಗುವಳು; ಅವನಿಗೆ ಅವಳು ಕೂಗಿದ್ದು ಕೇಳಿಸುವುದಿಲ್ಲವಾದ್ದರಿಂದ ಆಕೆ ಅನೇಕ ಬಾರಿ ಕೂಗುವಳು. ಕಡೆಗೆ ಅವನಿಗೆ ಕೂಗುವುದು ಕೇಳಿಸುವುದು; ಮೇಲೇಳುವನು. ಸಂಗೀತ ಕ್ರಮೇಣ ಕಡಿಮೆಯಾಗುತ್ತಾ ಇಲ್ಲವಾಗುವುದು.

ಎಕ್ಸ್-ರೇ ರೂಮಿನ ದೃಶ್ಯ. ಇಬ್ಬರು ಡಾಕ್ಟರ್, ಒಬ್ಬಳು ನರ್ಸ್ ಅಲ್ಲಿ ಕಾಯುತ್ತಿರುವಳು.

ವಾಟನಬಿ ಕೋಣೆಯೊಳಗೆ ಪ್ರವೇಶಿಸುತ್ತಿರುವನು. ಅವನು ಕುಳಿತುಕೊಳ್ಳುವಾಗ ಆ ಮೂವರು ಅವನನ್ನೇ ನೋಡುತ್ತಿರುವರು. ಈಗ ತಕ್ಷಣ ಡಾಕ್ಟರುಗಳ ಕ್ಲೋಸ್ ಅಪ್, ಅನಂತರ ವಾಟನಬಿಯ ಕ್ಲೋಸ್ ಅಪ್.

ಡಾಕ್ಟರ್ : ಬನ್ನಿ, ದಯವಿಟ್ಟು ಕುಳಿತುಕೊಳ್ಳಿ. ಅಂದ್ಹಾಗೆ, ನಿಮ್ಗೆ ಎಲ್ಲೋ ಸ್ವಲ್ಪ ಅಲ್ಸರ್ ಇರೋ ಲಕ್ಷಣಗಳು ಕಾಣಿಸ್ತಿವೆ, ಅಷ್ಟೆ.

ಈಗ ವಾಟನಬಿಯ ಕೈಗಳ ದೃಶ್ಯ. ಆತ ಕೈಯಲ್ಲಿ ಹಿಡಿದಿರುವ ಕೋಟನ್ನು ಬೀಳಿಸುವನು. ಸಂಗೀತ ಮತ್ತೆ ಪ್ರಾರಂಭವಾಗುವುದು. ಈಗ ಅವರೆಲ್ಲರ ಮುಖಗಳ ದೃಶ್ಯ.

ವಾಟನಬಿ : ನಂಜೊತೆ ಸುಳ್ಳೇಳ್ಬೇಡಿ, ಸತ್ಯ ಹೇಳಿ, ಹೇಳಿ ನನ್ಗೆ ಇದು ಕ್ಯಾನ್ಸರ್ ಅಂತ. ಸತ್ಯ ಹೇಳಿ.

ಡಾಕ್ಟರುಗಳ ಮುಖಗಳು; ನರ್ಸ್‌ಳ ಮುಖ; ಎಕ್ಸರೇ ಚಿತ್ರವನ್ನು ಪರೀಕ್ಷಿಸುತ್ತಿರುವ ಕಿರಿಯ ಡಾಕ್ಟರ ಹಿಂದಲೆಯ ನೋಟ. ನರ್ಸ್ ವಾಟನಬಿಯ ಕೋಟನ್ನು ಮೇಲೆತ್ತಿಕೊಳ್ಳುವಳು.

ಡಾಕ್ಟರ್ : ಖಂಡಿತವಾಗಿಯೂ ಅಲ್ಲ. ನಾನು ಮೊದಲೇ ಹೇಳ್ದಾಗೆ ಇದು ಸ್ವಲ್ಪ ಹೊಟ್ಟೆ ಹುಣ್ಣಿನ ತೊಂದ್ರೆ, ಅಷ್ಟೆ.

ವಾಟನಬಿ : ಆಪರೇಷನ್ ಸಾಧ್ಯವಿಲ್ಲವಾ ?

ಡಾಕ್ಟರ್ : ಆಪರೇಷನ್‌ನ ಅಗತ್ಯ ಕಾಣ್ತಿಲ್ಲ, ಔಷಧೀನೇ ಗುಣ ಮಾಡುತ್ತೆ.

ವಾಟನಬಿ : ಹಾಗಾದ್ರೆ ನಾನು ಏನೇನ್ ತಿನ್ನಬಹುದು.

ಡಾಕ್ಟರ್ : ನಿಮಗೆ ಇಷ್ಟಬಂದದ್ ತಿನ್ನಬಹುದು; ನಿಮ್ಗೆ ಅರಗಿಸಿಕೊಳ್ಳೋ ಶಕ್ತಿ ಇರೋವರ್ಗೆ.

ವಾಟನಬಿಯ ದೃಶ್ಯ. ಈ ಮಾತುಗಳನ್ನು ಕೇಳಿ ಆತ ಎಷ್ಟು ತಲೆತಗ್ಗಿಸು ವನೆಂದರೆ, ಅವನ ಹಣೆ ಡೆಸ್ಕ್‌ಗೆ ತಾಗುವುದು.

ಈಗ ಪುನಃ ಡಾಕ್ಟರುಗಳ ದೃಶ್ಯ.

ಕಿರಿಯ ಡಾಕ್ಟರ್ : ಅವನಿನ್ನು ಒಂದು ವರ್ಷ ಬದುಕಿರ್ತಾನ ?

ಹಿರಿಯ ಡಾಕ್ಟರ್ : ಇಲ್ಲ, ಹೆಚ್ಚು ಅಂದ್ರೆ ಇನ್ನು ಆರು ತಿಂಗಳು ಮಾತ್ರ. ಮಿಸ್ ಇಹಾರ, ನಿನಗಿನ್ನು ಕೇವಲ ಆರು ತಿಂಗಳು ಮಾತ್ರ ಆಯುಸ್ಸಿದೇ ಅಂದ್ರೆ ನೀನೇನ್ ಮಾಡ್ತೀಯಾ ? ಹುಂ, ಹೇಳು ಏನ್ಮಾಡ್ತೀಯಾ ?

ನರ್ಸ್ : ಹಾಗಂತ ಗೊತ್ತಾದ್ರೆ, ಅಲ್ಲಿ ಷೆಲ್ಫ್ ಮೇಲೆ ಹೇಗೂ ಸ್ವಲ್ಪ ವಿಷ ಇದೆಯಲ್ಲ...

ಎಕ್ಸ್–ರೇ ನೆಗೆಟಿವ್ ಪರೀಕ್ಷಿಸಲು ಕಿರಿಯ ಡಾಕ್ಟರ್ ಹಿಂತಿರುಗುವನು. ನೆಗೆಟಿವ್‌ನ ಕ್ಲೋಸ್ ಅಪ್ ಜೊತೆಗೆ ಎಕ್ಸ್–ರೇ ಯಂತ್ರದ ಶಬ್ದ ಕೇಳಿಸುವುದು.

ಬೀದಿಯ ದೃಶ್ಯ; ಲಾರಿ, ಕಾರುಗಳು. ವಾಟನಬಿ ನಡೆಯುತ್ತಿರುವನು, ಆದರೆ ಯಾವುದೇ ಶಬ್ದವಿಲ್ಲ. ಆತನು ರಸ್ತೆ ದಾಟಲು ಪ್ರಯತ್ನಿಸುವಾಗ ಒಂದು ಲಾರಿ ವೇಗವಾಗಿ ಬರುವುದು, ಇದ್ದಕ್ಕಿದ್ದಂತೆ ಭಯಂಕರ ಶಬ್ದವಾಗುವುದು. ವಾಟನಬಿಯ ಮುಂದೆ, ಕುಳ್ಳಗಿರುವ ಟ್ರಾಫಿಕ್‌ನವನು ಕಿರುಚುತ್ತಿರುವನು; ಆತ ಬೀದಿಯ ಆ ಕೊನೆಯಲ್ಲಿರುವುದರಿಂದ ಇತ್ತ ಬರಲು ಸಾಧ್ಯವಾಗುವುದಿಲ್ಲ.

ರಾತ್ರಿ; ವಾಟನಬಿ ಮನೆಯ ಮುಂಭಾಗದ ದೃಶ್ಯ. ಮುಂಬಾಗಿಲ ಕಡೆಗೆ ಕ್ಯಾಮರ ಚಲಿಸುತ್ತಿರುವುದು. ನಡೆಯುತ್ತಿರುವ ಶಬ್ದ ಹಾಗೂ ಯಾರೋ 'ಇನ್ನೂ

ಹರಯು' ಎಂಬ ಹಾಡೊಂದನ್ನು ಗುನುಗುತ್ತಿರುವನು ; ಅನಂತರ ವಾಟನಬಿಯ ಮಗ ಮಿತ್ಸು ಹಾಗೂ ಸೊಸೆ ಕಾಜುಹೆ—ಇವರ ಧ್ವನಿ.

ಕಾಜುಹೆ : ಒಳಗೆ ದೀಪಾನೇ ಇಲ್ಲ—ಮತ್ತೆ ಕರೆಂಟ್ ಏನಾದ್ರೂ ಹೋಗಿರಬೇಕು, ಆಶ್ಚರ್ಯ!

ಮಿತ್ಸು : ಇಲ್ಲ, ಪಕ್ಕದ ಮನೆಯವರ ದೀಪಗಳು ಉರೀತಿವೆ.

ಕಾಜುಹೆ : ಇದೊಳ್ಳೆ ತಮಾಷೆ ; ನಿಮ್ಮಪ್ಪ ಹೊರಗೇನಾದ್ರೂ ಹೋಗಿದಾರಾ ? ಬೀಗದ ಎಸಳೆಲ್ಲಿ ?

ಮಿತ್ಸು : ನಿನ್ನ ಕೈಚೀಲದಲ್ಲಿದೆ.

ಬಾಗಿಲ ಕಡೆಗೆ ಕ್ಯಾಮರ ಚಲಿಸುವುದು. ಬಾಗಿಲ ಪಾರ್ಶ್ವವೊಂದರ ಕ್ಲೋಸ್ ಅಪ್ ; ಇಬ್ಬರೂ ಬಾಗಿಲು ತೆಗೆದು ಒಳಬರುವರು.

ಕಾಜುಹೆ : ಅರೆ ; ಬೀಗ ಹಾಕಿಲ್ಲ. ಕೆಲಸದವಳೇನಾದ್ರೂ ಬೀಗ ಹಾಕೋಕೆ ಮರೆತ್ಬಿಟ್ಲಾ ? ಅವಳಿಗೆ ಯಾವಾಗ್ಲೂ ಮರಿಯೋದೇ ಕೆಲ್ಸ, ಎಲ್ಲಾನೂ ಮರೀತಾಳೆ.

ಮಿತ್ಸು : ಅವಳಿರೋದು ಬಹಳ ದೂರದಲ್ಲಿ. ಅದಕ್ಕೇ ಹಾಗೆ ಮಾಡ್ತಾಳೆ. ಅವಳು ಮನೇಗೋಗೋದಿಕ್ಕೆ ತುಂಬ ತಡವಾಗ್ಬಿಡುತ್ತೆ, ಹಾಗಾಗಿ ಅವಳು ಎಲ್ಲಾನೂ ಮರೀತಾಳೆ.

ಕಾಜುಹೆ : ಅವಳೂ ನಮ್ಮಲ್ಲೇ ಇರೋದಿಕ್ಕೆ ಅಂತಾ ಹೆಚ್ಚೇನೂ ಖರ್ಚಾಗೊಲ್ಲ.

ಮಿತ್ಸು : ಅಪ್ಪನ ವಿಷಯ ನಿನ್ಗೆ ಗೊತ್ತಲ್ಲ. ಅವರು ಯಾವುದ್ನೂ ಕಿವಿ ಮೇಲೇ ಹಾಕ್ಕೊಳ್ಳೋದಿಲ್ಲ.

ನಡುಮನೆಯ ಒಂದು ಕೋಣೆ ; ಅವರಿಬ್ಬರೂ ಕತ್ತಲೆಯಲ್ಲೇ ಮಹಡಿಮೆಟ್ಟಿಲ ಕಡೆ ನಡೆಯುತ್ತಿರುವರು.

ಕಾಜುಹೆ : ಹೊರಗೆ ಎಷ್ಟು ಚಳಿ ಇದ್ಯೋ ಒಳಗೂ ಅಷ್ಟೆ ಚಳಿ ಇದೆ— ಇಂಥ ಜಪಾನೀ ಶೈಲಿ ಮನೆಗಳದ್ದು ಇದೇ ಪಾಡು.

ಮಿತ್ಸು : ನನ್ಗೆ ಈ ಮನೆಗೆ ಬರೋಕೆ ಯಾವಾಗಲೂ ಬೇಜಾರಾಗುತ್ತೆ. ಹೊಸ ಥರ ಮನೆ ಇದ್ರೆ ಎಷ್ಟೊಂದು ಚಂದ ಅಲ್ವಾ.

ಈಗ ಅವರಿಬ್ಬರೂ ಮಹಡಿ ಮೆಟ್ಟಿಲು ಹತ್ತುತ್ತಿರುವ ದೃಶ್ಯ.

ಕಾಜುಹೆ : ಅಂದ್ಹಾಗೆ, ನಾವು ಐನೂರು ಸಾವಿರ ಯೆನ್ ಹಣದಲ್ಲಿ ಒಂದು ಮನೆ ಕಟ್ಟಬಹುದಲ್ವಾ ? ಆಗೊಲ್ವೇನು ? ಬಹುಶಃ ಅದಕ್ಕೆ ನಿಮ್ಮ ತಂದೆಯ ವಿಶ್ರಾಂತಿವೇತನವನ್ನು ಉಪಯೋಗಿಸ್ಬೇಕಾಗುತ್ತೆ.

ಮಿತ್ಸು : ಅವರಿಗೆ ಏಳನೂರು ಸಾವಿರ ಯೆನ್ ಹಣ ಸಿಗುತ್ತೆ; ಜೊತೆಗೆ ಪ್ರತಿ ತಿಂಗಳು ಪೆನ್‌ಷನ್ ಕೂಡ ದೊರೆಯುತ್ತೆ. ಅವರ ಹತ್ರ ಸುಮಾರು ನೂರ್ ಸಾವಿರ ಯೆನ್ ಕೂಡಿಟ್ಟ ಹಣ ಇದೆ.

ಕಾಜುಹೆ : ಆದರೆ ಅವರು ಇದಕ್ಕೆ ಒಪ್ತಾರೆ ಅನ್ನುಸ್ತಾ ನಿಮ್ಗೆ?

ಈಗ ಮಹಡಿಯಲ್ಲಿನ ಕತ್ತಲೆ ಕೋಣೆಗಳ ದೃಶ್ಯ.

ಮಿತ್ಸು : ಒಪ್ಪದೇ ಹೋದ್ರೆ ಮತ್ತಿನ್ನೇನು, ಅವರು ಬೇರೆ ಇರ್ಬೇಕಾಗುತ್ತೆ. ಬಹುಶಃ ಅದೊಂದೇ ಸರಿಯಾದ ದಾರಿ ಅನ್ನುಸ್ತೆ. ಅಷ್ಟಕ್ಕೂ ಅವರೇನು ಹಣಾನ ತಾವೇ ತಗೊಂಡ್ಹೋಗಲ್ಲ.

ಕಾಜುಹೆ ನಗುವಳು. ಮಿತ್ಸು ಸ್ವಿಚ್ ಹುಡುಕಿ ದೀಪ ಹಾಕುವನು. ವಾಟನಬಿ ಅವನ ಕಾಲ ಬಳಿಯೇ ಕುಳಿತಿರುವನು; ಆತ ಆ ಕತ್ತಲೆಯಲ್ಲಿಯೇ ತುಂಬಾ ಹೊತ್ತಿನಿಂದ ಕುಳಿತಿದ್ದಾನೆ.

ಈಗ ವಾಟನಬಿಯ ಮುಖದ ನೋಟ; ಅನಂತರ ಅವನ ಮಗನ ಮುಖದ ನೋಟ.

ಮಿತ್ಸು : ಅಪ್ಪ, ಏನ್ ವಿಷಯ ?!

ವಾಟನಬಿ : (ಹತಾಶನಾಗಿ) ಓಹ್, ಏನೂ ಇಲ್ಲ, ಏನೂ ಇಲ್ಲ.

ಆತ ಮೇಲೇಳುವನು. ಗೊಂದಲಗೊಳ್ಳುವನು; ಅನಂತರ ಆತ ತನ್ನ ಕೋಣೆಗೆ ಹೋಗುವನು.

ಈಗ ಮಿತ್ಸು ಮತ್ತು ಕಾಜುಹೆ ಪರಸ್ಪರ ಮುಖ ನೋಡಿಕೊಳ್ಳುತ್ತಿರುವರು. ಆಕೆ ಇನ್ನೂ ಕೆಲವು ದೀಪ ಹಾಕತೊಡಗುವಳು.

ಕಾಜುಹೆ : ನಾವು ಮಾತ್ನಾಡಿದ್ನೆಲ್ಲ ಅವರು ಕೇಳಿಸ್ಕೊಂಡಿದ್ದಾರೆ. ಅವರದು ನಿಜಕ್ಕೂ ಅಸಭ್ಯ ವರ್ತನೆ. ನಾವು ಹೊರಗೆ ಹೋಗಿದ್ದಾಗ ಅವರು ಮೇಲತ್ತಿ ಇಲ್ಲಿಗೆ ಬರ್ತಾಬರ್ತಿದ್ದು. ಇದು ನಿಜಕ್ಕೂ ಯೋಗ್ಯ ನಡತೆಯಲ್ಲ ಅಂತೀನಿ ನಾನು.

ಮಿತ್ಸು : ತಮಗೇನ್ಬೇಕು ಅಂತಾ ಅವರು ಯಾಕೆ ಹೇಳ್ಬಾರ್ದು ? ಈ ಥರ ಯಾಕೆ ಅವರು ಓಡಿಹೋಗ್ಬೇಕು ?

ಮಹಡಿ ಕೆಳಗೆ, ತನ್ನ ಕತ್ತಲೆ ಕೋಣೆಯಲ್ಲಿ ವಾಟನಬಿ. ಆತ ದೀಪ ಹಾಕುವನು. ಕೋಣೆಯ ಮೂಲೆಯೊಂದರಲ್ಲಿರುವ ಸಣ್ಣ ಪೂಜಾ ಮಂದಿರದ ಹತ್ತಿರ ಹೋಗುವಾಗ ಅವನ ಕೈಯಲ್ಲೊಂದು ಪರಿವಾಣವಿದೆ, ಪೂಜಾಮಂದಿರದ ಬಾಗಿಲು ತೆರೆಯುವನು.

ಮಹಡಿಯ ಮೇಲೆ ಮಿತ್ಸು; ಆತ ಹಾಸಿಗೆಯ ಮೇಲೆ ಬಿದ್ದುಕೊಂಡಿರುವನು; ಹೊದಿಕೆ ತೆಗೆದುಕೊಳ್ಳಲು ಕಾಜುಹೆ ಆತನನ್ನು ಪಕ್ಕಕ್ಕೆ ಸರಿಸುತ್ತಿರುವಳು.

ಆತ ಆಕೆಯ ಕಡೆಗೆ ನೋಡುವನು ; ಆಕೆ ಬಂದು ಹಾಸಿಗೆಯ ಮೇಲೆ ಕುಳಿತುಕೊಳ್ಳುವಳು. ಅನಂತರ ಆತನ ಪಕ್ಕದಲ್ಲಿ ಮಲಗುವಳು.

ಕಾಜುಹೆ : ನೀವು ಆ ಥರ ನೋಡ್ತೇಡಿ, ನಿಮ್ಮ ತಂದೇ ವಿಷಯಾನ ಇನ್ನು ಮರೆತು ಬಿಡೋಣ. ಮುಂದೆ ನಮ್ಮ ಬಗ್ಗೆ ಸ್ವಲ್ಪ ಹೆಚ್ಚು ಯೋಚಿಸೋಣ.

ಅವರು ರೇಡಿಯೋ ಹಾಕಿರುವರು. 'ಇನ್ನೂ ಹರಯ' ಎಂಬ ಹಾಡು ಬರುತ್ತಿರುವುದು. ಆಕೆ ಅವನ ಕಡೆಗೆ ತಿರುಗಿಕೊಂಡು ಅವನನ್ನು ಆಲಂಗಿಸಿಕೊಳ್ಳುವಳು ; ತನ್ನನ್ನು ಬಿಗಿಯಾಗಿ ತಬ್ಬುವಂತೆ ಅವನಿಗೆ ಹೇಳುವಳು.

ವಾಟನಬಿಯ ಕೋಣೆ. ಆತ ಬಾಗಿಲು ತೆರೆದಿರುವ ಪೂಜಾಮಂದಿರದ ಎದುರು ಕುಳಿತಿರುವನು. ಚಿಕ್ಕ ಪೂಜಾಮಂದಿರ, ಅದರ ಒಳಗೆ ಅವನ ಗತಿಸಿದ ಮಡದಿಯ ಭಾವಚಿತ್ರವಿದೆ. ಆ ಭಾವಚಿತ್ರದ ಸನಿಹ ನೋಟ. ಅದನ್ನು ದಿಟ್ಟಿಸುತ್ತಿರುವ ವಾಟನಬಿಯ ಸನಿಹ ನೋಟ, ಪ್ರಧಾನವಾಗಿ ಎದ್ದುಕಾಣುವ ಭಾವಚಿತ್ರದ ನೋಟ.

ಈಗ ಫ್ಲಾಶ್‌ಬ್ಯಾಕ್—ಶವಪೆಟ್ಟಿಗೆಯನ್ನು ಹೊತ್ತು ಹೋಗುತ್ತಿರುವ ಬಂಡಿ, ಅದನ್ನು ಹಿಂಬಾಲಿಸುತ್ತಿರುವ ಕಾರು, ಮಳೆಹನಿ ಬಿದ್ದು ಮಬ್ಬಾಗಿರುವ ಕಾರಿನ ಮುಂಭಾಗದ ಗಾಜಿನ ಮೂಲಕ ಶವ ಬಂಡಿ ಕಾಣುತ್ತಿರುವುದು. ಕಾರಿನ ಮುಂಭಾಗದ ಗಾಜನ್ನೊರಿಸುತ್ತಿರುವ ವೈಪರ್‌ಗಳ ಶಬ್ದ. ಹಿಂಭಾಗದ ಸೀಟು, ಅದರಲ್ಲಿ ವಾಟನಬಿ, ಕೀಚೀ (ವಾಟನಬಿಯ ಸಹೋದರ), ತಾತ್ಸು (ವಾಟನಬಿಯ ನಾದಿನಿ) (ಇವರಿಗೆಲ್ಲ ಇನ್ನೂ ತರುಣ ವಯಸ್ಸು), ಮಿತ್ಸು (ಮಗು)—ಇವರೆಲ್ಲ ಅಂತ್ಯಕ್ರಿಯೆಗೆ ಹೋಗುತ್ತಿರುವರು.

ತಾತ್ಸು : ಅವಳಿನ್ನೂ ಚಿಕ್ಕವಳು—ತನ್ನ ಪುಟ್ಟ ಮಗೂನ ಬಿಟ್ಟು ಸಾಯೋಕೆ ಅವಳಿಗೆ ಎಷ್ಟೊಂದು ಸಂಕಟವಾಗಿರಬೇಕು.

ಕೀಚೀ : ನೀನು ಅಳೋದನ್ನ ನಿಲ್ಸು.

ಈಗ ಶವಬಂಡಿ ಒಂದು ಮೂಲೆಯಲ್ಲಿ ತಿರುಗಿಕೊಳ್ಳುತ್ತಿರುವ ದೃಶ್ಯ : ಚಿಕ್ಕ ಮಗು ಮಿತ್ಸುವಿನ ನೋಟ; ಪುನಃ ಶವಬಂಡಿಯ ನೋಟ; ಪುನಃ ಮಿತ್ಸುವಿನ ನೋಟ. ಚಿತ್ರದ ಆರಂಭದಲ್ಲಿ ಕೇಳಿದ್ದ ಅದೇ ಕರುಣಾಜನಕ ಸಂಗೀತ. (ಶವಬಂಡಿ ಯಾವಾಗಲೂ ಕಾರಿನ ಮುಂಗಾಜಿನ ಮೂಲಕವೇ ಕಾಣುತ್ತಿದೆ, ವೈಪರ್‌ನಿಂದಾಗಿ ಒಮ್ಮೊಮ್ಮೆ ಕ್ಷಣ ಮರೆಯಾಗಿ ಮತ್ತೆ ಕಾಣಿಸುವುದು)

ಮಿತ್ಸು : ನಾವು ಬೇಗ ಬೇಗ ಹೋಗ್ಬೇಕು. ನಾವು ಅಮ್ಮನಿಗಿಂತ ತುಂಬಾ ಹಿಂದಾಗ್ಬಿಟ್ವಿ.

ಕಾರಿನ ಹಿಂದಿನ ಸೀಟಿನಲ್ಲಿ ನೋಟ, ವಾಟನಬಿ ತನ್ನ ಮಗನನ್ನು ತಬ್ಬಿ ಹಿಡಿದುಕೊಂಡಿರುವನು, ಅವನ ಕಣ್ಣಿನಲ್ಲಿ ನೀರು.

ಫ್ಲಾಶ್‌ಬ್ಯಾಕ್ ಮುಗಿಯುವುದು. ಈಗ ವಾಟನಬಿಯ ಕೋಣೆಯ ದೃಶ್ಯ. ಮೇಲಿನಿಂದ ಹಾಡಿನ ಶಬ್ದದ ಜೊತೆಗೆ ಮಿತ್ಸು ಮತ್ತು ಕಾಜುಹೆ ಕಿಲಕಿಲ ನಗುತ್ತಿರುವ ಶಬ್ದ ಕೇಳಿಬರುವುದು. ವಾಟನಬಿಯು ಶಬ್ದ ಬರುತ್ತಿರುವ ಕಡೆಗೆ, ಕತ್ತೆತ್ತಿ ನೋಡುವನು. ಅವರಿಬ್ಬರೂ ಪ್ರಣಯಚೇಷ್ಟೆಯಲ್ಲಿ ತೊಡಗಿರುವಂತೆ ಕಾಣುವುದು.

ಈಗ ಫ್ಲಾಶ್‌ಬ್ಯಾಕ್—ಇನ್ನೊಂದು ಕೋಣೆಯ ದೃಶ್ಯ. ವಾಟನಬಿ ಮತ್ತು ಅವನ ತಮ್ಮ ಕೀಚೀ ಇಬ್ಬರೂ ಮಾತನಾಡುತ್ತಿರುವರು. ಅವರಿಬ್ಬರೂ ಇನ್ನೂ ಯುವಕರು.

ಕೀಚೀ : ಮಿತ್ಸು ಇರೋದ್ರಿಂದ ನೀನು ಮತ್ತೆ ಮದುವೆಯಾಗೋದಿಲ್ಲ ಅಂತ ಹೇಳ್ತಿದೀಯ ; ಇನ್ನೂ ಸ್ವಲ್ಪ ದಿನ ಹೋಗ್ಲಿ, ಕಾಯ್ತೀನಿ ಅಂತೀಯ. ಅವನು ದೊಡ್ಡವನಾದ ಮೇಲೆ ನೀನು ತಿಳಿದಿರೋಥರದಲ್ಲಿ ಕೃತಜ್ಞನಾಗಿ ರೋಲ್ಲ. ಅವನು ಮದುವೆಯಾದ ಮೇಲೆ ನೀನು ಅವನಿಗೆ ಹೊರೆಯಾಗ್ತೀಯ. ಆ ಕಾರಣಕ್ಕಾಗಿ ನೀನೀಗ ಮತ್ತೆ ಮದುವೆಯಾಗ್ಬೇಕಾಗಿದೆ. ನೀನು ಮೊದಲೇ ಮೃದು ಸ್ವಭಾವದವನು ಅಂತಾ ಬೇರೆ ನನ್ನ ಹೆಂಡ್ತಿ ಹೇಳ್ತಾಳೆ. ನೀನು ಒಂಟಿಯಾಗಿರೋದನ್ನ ಕಲ್ಪಿಸಿಕೊಳ್ಳೋದಕ್ಕೆ ಕೂಡ ಅವಳಿಗೆ ಕಷ್ಟವಾಗಿದೆ ಯಂತೆ.

ವಾಟನಬಿಯ ತಮ್ಮ ಮಾತನಾಡುತ್ತಿರುವಂತೆಯೇ ವಾಟನಬಿ ಅನ್ಯಮನಸ್ಕನಾಗಿ ಪುಸ್ತಕವೊಂದರ ಪುಟಗಳನ್ನು ಸುಮ್ಮನೆ ತಿರುವಿಹಾಕುತ್ತಿರುವನು.

ಫ್ಲಾಶ್‌ಬ್ಯಾಕ್ ಮುಗಿಯುವುದು. ಈಗ ಪುನಃ ವಾಟನಬಿಯ ಕೋಣೆಯ ದೃಶ್ಯ. ಮಗು ತನ್ನನ್ನು ಕೂಗುತ್ತಿರುವುದು ಕೇಳಿಸುವುದು, ಮೇಲೇಳುವನು, ಮಹಡಿ ಮೆಟ್ಟಿಲ ಕಡೆಗೆ ಹೋಗುವನು. ಮೆಟ್ಟಿಲು ಹತ್ತತೊಡಗುವನು. ಮಹಡಿ ಮೇಲಿಂದ ಮಹಡಿ ಮೆಟ್ಟಿಲ ದೃಶ್ಯ. ವಾಟನಬಿ ಮಹಡಿ ಮೆಟ್ಟಿಲು ಹತ್ತಿ ಅರ್ಧ ದಾರಿಗೆ ಬಂದಿರುವಂತೆಯೇ ಮಿಸ್ಸುವಿನ ಧ್ವನಿ ಮುಂದುವರಿದಿದೆ.

ಮಿಸ್ಸು (ಅದೃಶ್ಯ) : ಗುಡ್‌ನೈಟ್, ಅಪ್ಪ, ನೀವೇ ಸ್ವಲ್ಪ ಬಾಗಿಲ ಚಿಲಕ ಹಾಕಿಕೊಳ್ತೀರೇನು?

ವಾಟನಬಿ ನಿಲ್ಲುವನು. ಅನಂತರ ಮೆಟ್ಟಿಲ ಮೇಲೆ ಸ್ವಲ್ಪ ಹೊತ್ತು ತಲೆಯಿಟ್ಟು ಕೂರುವನು. ಅನಂತರ ಮೆಟ್ಟಿಲಿಳಿಯುತ್ತ 'ಮಿತ್ಸು' ಎಂದು ನುಡಿದು ತನ್ನಷ್ಟಕ್ಕೆ ತಾನೇ ನಿಟ್ಟುಸಿರಿಡುತ್ತ ಕತ್ತಲೆಯಲ್ಲಿ ನಡೆದುಹೋಗುವನು.

ಈಗ ನಡುಮನೆಯ ದೃಶ್ಯ. ನಿಧಾನವಾಗಿ ನಡುಮನೆಯನ್ನು ಹಾದುಹೋಗಿ ಮುಂಬಾಗಿಲ ಚಿಲಕ ಹಾಕುವನು. ಅನಂತರ ಅಭ್ಯಾಸಬಲದಿಂದ, ಮೂಲೆಯೊಂದರಿಂದ ಬೇಸ್‌ಬಾಲ್ ಬ್ಯಾಟ್ ಒಂದನ್ನು ತೆಗೆದುಕೊಂಡು, ಹೊರಗಿನಿಂದ ತೆಗೆಯಲು ಸಾಧ್ಯವಾಗದ ರೀತಿಯಲ್ಲಿ ಚಿಲಕಕ್ಕೆ ಕುಟ್ಟುವನು.

ಫ್ಲಾಶ್‌ಬ್ಲಾಕ್‌ನಲ್ಲಿ ಈಗ ಬೇಸ್‌ಬಾಲ್ ಬ್ಯಾಟಿನ ಕ್ಲೋಸ್–ಅಪ್. ಅದೇ ಸಮಯಕ್ಕೆ ಚೆಂಡು ಬಾರಿಸಿದ ಶಬ್ದ. ಗುಂಪಿನ ಹರ್ಷೋದ್ಗಾರ. ಗುಂಪಿನ ಧ್ವನಿಯಲ್ಲಿ ಚಿತ್ರದ ಆರಂಭದಲ್ಲಿ ಕೇಳಿಬಂದಿದ್ದ ಸಂಗೀತ ಮೃದುವಾಗಿ ಕೇಳಿಸುವುದು.

ಈಗ ವಾಟನಬಿ ಕುತೂಹಲದಿಂದ ಬೇಸ್‌ಬಾಲ್ ಆಟವನ್ನು ನೋಡುತ್ತಿರುವನು. ಆತ ತನ್ನ ಪಕ್ಕದ ವ್ಯಕ್ತಿಯ ಕಡೆಗೆ ತಿರುಗುವನು.

ವಾಟನಬಿ : ಮಿತ್ಸು! ಅದು ಭರ್ಜರಿ ಹೊಡೆತ, ಅಲ್ವೇನು ? ನೋಡಿದ್ಯಾ ಅದನ್ನ ?
ಆ ಬ್ಯಾಟ್ಸ್‌ಮನ್ ಇದ್ದಾನಲ್ಲ ಅವನು ನನ್ನ...

ಈಗ ಬೇಸ್‌ಬಾಲ್ ಆಟದ ದೃಶ್ಯ. ಚಿಕ್ಕ ಹುಡುಗ ಮಿತ್ಸು ಓಡಿಹೋಗುತ್ತಿರುವ ಉಜ್ವಲ ನೋಟ. ಈಗ ವಾಟನಬಿ ಮತ್ತೆ ಮಗನ ಹೆಸರಿಡಿದು ಕೂಗುತ್ತಿರುವನು. ಬೇಸ್‌ಬಾಲ್ ಆಟದ ಮೇಲೆ ಉಜ್ವಲ ಬೆಳಕು. ಅಲ್ಲಿ ಏನೋ ಅಚಾತುರ್ಯ ನಡೆದಿದೆ. ಈಗ ವಾಟನಬಿ ಮತ್ತು ವ್ಯಕ್ತಿಯ ದೃಶ್ಯ.

ವ್ಯಕ್ತಿ : ಅದೇನೋ ಮಾಡ್ತಿದಾನಲ್ಲ ಅವನು, ಅದೇನು ಅಂತಾ ತಿಳಿದಿದ್ದಾನೆ ?

ಫ್ಲಾಶ್‌ಬ್ಯಾಕ್ ಮುಗಿದು ಈಗ ವಾಟನಬಿ ತನ್ನ ರೂಮಿನಲ್ಲಿ. ಆತ ಕುಳಿತುಕೊಳ್ಳುತ್ತಿರುವಂತೆಯೇ ಅವನೊಡನೆ ಕ್ಯಾಮರಾ ಕೂಡ ಕೆಳಗೆ ಚಲಿಸುವುದು.

ಮತ್ತೆ ಫ್ಲಾಶ್‌ಬ್ಯಾಕ್‌ನಲ್ಲಿ ಈಗ ವಾಟನಬಿ ಬಾಲ್ ಆಟದ ಮೈದಾನದಲ್ಲಿ, ಅವನು ಕುಳಿತುಕೊಳ್ಳುತ್ತಿರುವಂತೆಯೇ ಅವನೊಡನೆ ಕ್ಯಾಮರಾ ಕೂಡ ಕೆಳಗೆ ಚಲಿಸುವುದು.

ಈಗ ವಾಟನಬಿ ಮತ್ತು ಮಿತ್ಸು ಇರುವ ದೃಶ್ಯ. ಮಿತ್ಸು ಆಸ್ಪತ್ರೆಯ ಸ್ಟ್ರೆಚರ್‌ನಲ್ಲಿ ಮಲಗಿರುವನು, ಆಸ್ಪತ್ರೆಯ ಎಲಿವೇಟರ್ ಮೇಲೆ ಹೋಗುತ್ತಿದೆ, ಅದರ ಜೊತೆಗೆ ಕ್ಯಾಮರಾ ಕೂಡ ಮೇಲಕ್ಕೆ ಚಲಿಸುತ್ತಿದೆ.

ವಾಟನಬಿ : ಮಿತ್ಸು ; ನೀನಿಗ ಧೈರ್ಯವಾಗಿರ್ಬೇಕು. ಇನ್ನೇನೂ ಅಲ್ಲ, ಒಂದು ಸಣ್ಣ
ಅಪೆಂಡಿಕ್ಸ್ ಅಪರೇಷನ್, ಅಷ್ಟೆ.

ಮಿತ್ಸು : ಮತ್ತೆ, ನನ್ನ ಜೊತೇಲಿ ನೀವು ಇರೋಲ್ವಾ ?

ವಾಟನಬಿ : ನನ್ಗೆ...ನನ್ಗೆ ಕೆಲವು ಕೆಲಸಗಳಿವೆ.

ಎಲಿವೇಟರ್ ಬಾಗಿಲು ತೆರೆಯುವುದು, ಹುಡುಗನನ್ನು ಗಾಲಿ ಕುರ್ಚಿಯಲ್ಲಿ ಹೊರಗೆ ಕರೆದುಕೊಳ್ಳುವರು.

ವಾಟನಬಿ ತನ್ನ ಮಗನ ಹೆಸರನ್ನು ಪದೇಪದೇ ಉಚ್ಚರಿಸುತ್ತಿರುವ ಧ್ವನಿ ಕೇಳಿಸುತ್ತಿರುವಂತೆಯೇ ಇಡೀ ದೃಶ್ಯದಲ್ಲಿ ಸಂಗೀತವೂ ಹೆಚ್ಚುವುದು.

ಫ್ಲಾಶ್‌ಬ್ಯಾಕ್ ಮುಗಿದು ಈಗ ನಡುಮನೆ ದೃಶ್ಯ. ಆತ ಇನ್ನು ಅಲ್ಲೇ ನಿಂತು ತನಗೆತಾನೇ...ಮಗನ ಹೆಸರನ್ನು ಪದೇ ಪದೇ ಉಚ್ಚರಿಸುತ್ತಿರುವನು.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ರೈಲ್ವೆ ನಿಲ್ದಾಣದ ದೃಶ್ಯ. ಯುದ್ಧದ ದಿನಗಳು. ವಿದ್ಯಾರ್ಥಿಗಳನ್ನು ಯುದ್ಧಕ್ಕೆ ಸಜ್ಜುಗೊಳಿಸಿ, ಅವರನ್ನು ಹೊರಗೆ ಕಳುಹಿಸಿಕೊಡಲಾಗುತ್ತಿದೆ. ತಂದೆತಾಯಿಗಳು, ಅಣ್ಣತಮ್ಮಂದಿರು, ಅಕ್ಕತಂಗಿಯರು, ನೂರಾರು ಜನ ಅಲ್ಲಿದ್ದಾರೆ. ಇವರೆಲ್ಲರೂ ಬಾವುಟ ಬಿಸುತ್ತ ಗೋಳಾಡುತ್ತಿರುವರು.

ಈಗ ಪ್ರಧಾನವಾಗಿ ಕಾಣಿಸುತ್ತಿರುವವನು ಮಿತ್ಸು. ಆತ ದೊಡ್ಡವನಾಗಿರುವನು, ಸಮವಸ್ತ್ರ ಧರಿಸಿರುವನು. ವಾಟನಬಿ ಹೆಸರಿಡಿದು ಕೂಗುತ್ತಿರುವನು. ಮಿತ್ಸು ತನ್ನ ತಂದೆಯನ್ನು ನೋಡುತ್ತಿರುವನು. ಅವನಿಗೆ ಇನ್ನೇನು ಅಳು ಬರುವುದರಲ್ಲಿದೆ. ಆತ ರೈಲಿನಿಂದ ಕೆಳಗಿಳಿಯುವನು. ರೈಲು ಚಲಿಸತೊಡಗುವುದು, ಅವನ ತಂದೆ ವಾಪಸು ಅವನನ್ನು ರೈಲುಬಂಡಿಯ ಒಳಕ್ಕೆ ತಳ್ಳುವನು, ರೈಲು ಮುಂದೆ ಹೋದಂತೆ ತಂದೆಯು ಕಡೆ ತಿರುಗಿ ಅವನ ಮುಖ ದರ್ಶನಕ್ಕಾಗಿ ಹುಡುಕುವನು. ಇದೇ ವೇಳೆಯಲ್ಲಿ ವಾಟನಬಿ ಪದೇಪದೇ ಮಿತ್ಸು, ಮಿತ್ಸು, ಮಿತ್ಸು ಎಂದು ಕೂಗುತ್ತಿರುವುದು ಕೇಳಿಸುವುದು. ಹುಡುಗನ ಮುಖ ದೂರದಿಂದ ಹಾಗೆ ಕರಗಿಹೋಗಿ ಈಗ ನಡುಮನೆಯಲ್ಲಿ ನಿಂತಿರುವ ವಾಟನಬಿಯ ಮುಖ ಕಾಣಿಸುವುದು. ಆತ ಮಹಡಿಯ ಮೇಲಕ್ಕೆ ಹೋಗಲು ಹೊರಡುವನು. ಆದರೆ ಅರ್ಧದಲ್ಲೇ ನಿಲ್ಲುವನು.

ಮೇಲಿನ ದೃಶ್ಯ ಕ್ರಮೇಣ ಮರೆಯಾಗಿ ಈಗ ವಾಟನಬಿಯ ಕೋಣೆಯ ದೃಶ್ಯ. ಆತ ತನ್ನ ಕೆಮೊನೊ ಬಿಚ್ಚಿ ನೇತುಹಾಕುವನು ; ಶರಾಯಿಗಳನ್ನು ಮರದ ಹಲಗೆಯ ಮೇಲೆ ಇಸ್ತ್ರಿಮಾಡಲು ಇಡುವನು. ತನ್ನ ಪಾಕೆಟ್ ಗಡಿಯಾರಕ್ಕೆ ಕೀಲಿ ಕೊಡುವನು, ಅನಂತರ ಅದನ್ನು ಟೇಬಲ್ ಮೇಲೆ ಇಡುವನು ; ಅಲಾರಂ ಗಡಿಯಾರ ತೆಗೆದುಕೊಳ್ಳುವನು, ಅದಕ್ಕೆ ಕೀಲಿ ಕೊಡ ತೊಡಗುವನು, ಅನಂತರ ಆ ಕೆಲಸವನ್ನು ಅರ್ಧಕ್ಕೇ ನಿಲ್ಲಿಸುವನು. ಇಷ್ಟೆಲ್ಲ ಕೆಲಸಗಳನ್ನು ಆತ ಅಭ್ಯಾಸಬಲದಿಂದ ಮಾಡುವನು. ಅನಂತರ ಆತ ಇದ್ದಕ್ಕಿದ್ದಂತೆ ನಿಶ್ಚಲವಾಗುವನು, ಚಲಿಸುವುದಿಲ್ಲ. ಹೀಗೆ ಕೆಲವು ಕ್ಷಣಗಳು ಕಳೆಯುವುವು. ಅನಂತರ ಇದ್ದಕ್ಕಿದ್ದಂತೆ ಆತ ಹಿಂದಿರುಗಿ ಹಾಸಿಗೆಯ ಹೊದಿಕೆಯೊಳಗೆ ನುಸುಳಿಕೊಳ್ಳುವನು, ಭಯವಿಹ್ವಲಗೊಂಡವನಂತೆ ತಲೆಯ ತುಂಬ ಹೊದಿಕೆಯನ್ನು ಎಳೆದುಕೊಳ್ಳುವನು. ಅಳತೊಡಗುವನು.

ಈಗ ಕೋಣೆಯ ವ್ಯಾಪಕ ದೃಶ್ಯ. ಅಸ್ತವ್ಯಸ್ತವಾಗಿ ಬಿದ್ದಿರುವ ವಾಟನಬಿಯ ಸಾಮಾನು ಸರಂಜಾಮುಗಳ ರಾಶಿಯ ನಡುವೆ, ಕಟ್ಟಿಹಾಕಿಸಿ ಗೋಡೆಗೆ ನೇತುಹಾಕಿರುವ ಎರಡು ಪತ್ರಗಳು ಕಾಣಿಸುವುವು. "ಅಭಿನಂದನಾ ಪತ್ರ. ಇಪ್ಪತ್ತೈದು ವರ್ಷಗಳ ಅಮೂಲ್ಯ ಸೇವೆಗಾಗಿ ಶ್ರೀಮಾನ್ ವಾಟನಬಿ ಕಂಜಿ ಅವರನ್ನು ಗೌರವಿಸಲಾಗಿದೆ." ಎಂಬ ಒಂದು ಪತ್ರದ ಕ್ಲೋಸ್-ಅಪ್. ಅಳುವಿನ ಶಬ್ದ ಮುಂದುವರಿಯುವುದು.

ಈಗ ನಡುಮನೆಯ ದೃಶ್ಯ. ಬೆಳಗಿನ ಸಮಯ. ವಾಟನಬಿ ಕೆಲಸ ಮಾಡುವ ಕಛೇರಿಯ ಗುಮಾಸ್ತ ಸಕಾಯಿ ಬಾಗಿಲು ಬಳಿ ಪರಿಚಾರಿಕೆಯೊಡನೆ ಮಾತನಾಡುತ್ತಿರುವನು.

ಪರಿಚಾರಿಕೆ : ಮತ್ತೆ ಅವರು ಯಾವಾಗಲೂ ಸರಿಯಾದ ಸಮಯಕ್ಕೆ ಕೆಲಸಕ್ಕೆ ಹೋಗ್ತಿದ್ರು.

ಸಕಾಯಿ : ಉಹ್, ಅವರು ಐದು ದಿನದಿಂದ ಕಛೇರಿಗೆ ಬಂದಿಲ್ಲ, ಹೋಗ್ಲಿ, ಬರೋಕಾಗಲ್ಲ ಅಂತಾ ರಜಾ ಚೀಟೀನೂ ಕಳ್ಸಿಲ್ಲ. ಏನು ಸಮಾಚಾರ ನೋಡ್ಕಂಡಿ ಬನ್ನಿ ಅಂತಾ ಹೇಳಿದ್ರಿಂದಾ ನಾನು ಬಂದೆ.

ಆಕೆ ಕಾಜುಹೆಯನ್ನು ಕರೆಯಲು ಮನೆಯ ಒಳಗೆ ಹೋಗುವಳು.

ದೃಶ್ಯ ಬದಲು : ಟೆಲಿಫೋನ್ ಬೂತ್, ಒಳಗೆ ಕಾಜುಹೆ ಮಾತನಾಡುತ್ತಿರುವಳು.

ದೃಶ್ಯ ಬದಲು—ಆಫೀಸ್. ಮಿತ್ಸು ಟೆಲಿಫೋನ್‌ನಲ್ಲಿ ಸಂಭಾಷಿಸುತ್ತಿರುವನು. ಅವರ ಸಂಭಾಷಣೆ ನಮಗೆ ಕೇಳಿಸುತ್ತಿದೆ.

ಮಿತ್ಸು : ನನ್ಗೆ ನಂಬೋಕೆ ಸಾಧ್ಯವಾಗಿಲ್ಲ.

ಕಾಜುಹೆ : ಆದ್ರೆ, ಅದು ನಿಜವಿರ್ಬೇಕು. ಅವರ ಕಛೇರಿಯವನು ಹಾಗಂತ ಹೇಳ್ದ.

ಮಿತ್ಸು : ಆದರೆ, ಅವರು ಹೀಗೆ ಹೋಗಿ ಏನ್ಮಾಡ್ತಿರಬಹುದು ?

ಈಗ ವಾಟನಬಿಯ ಕಛೇರಿಯ ದೃಶ್ಯ. ಕಛೇರಿಯಲ್ಲಿರುವ ಇತರರು ಮಾತನಾಡುತ್ತಿರುವರು. ವಾಟನಬಿಯ ಖಾಲಿ ಡೆಸ್ಕ್‌ನ ದೂರದೃಶ್ಯ.

ಸಕಾಯಿ : ಅದು ನಿಜವೇ, ಅವರ ಮನೆಯವರು ನಿಜಕ್ಕೂ ಗಾಬರಿಯಾಗಿದ್ದಾರೆ.

ಟೊಯೊ : ಆದರೆ ಇದು ಬಹಳ ಗಂಭೀರ ವಿಷಯ.

ಒನೊ : ಅವರು ಬರೋವರೆಗೂ ಬಹುಶಃ ನಾನೇ ಎಲ್ಲ ತೀರ್ಮಾನಗಳನ್ನು ತಗೋಬಹುದು.

ಟೊಯೊ : ಆದರೆ ನೀನೇ ಹೋಗಿ ಅವರ ಮೊಹರು ತರಬೇಕಾಗುತ್ತೆ, ಆಗ ನಾನು ಬಿಟ್ಹೋಗಬಹುದು.

ಒನೊ : ಇದರರ್ಥ ನೀನು ರಾಜೀನಾಮೆ ಕೊಡ್ತೀನಿ ಅಂತಾ ಏನು ?

ಟೊಯೊ ಮುಖದ ಕ್ಲೋಸ್ ಅಪ್ ದೃಶ್ಯ.

ಟೊಯೊ : ಹೌದು, ಈ ಕೆಲಸ ನನಗೆ ಒಗ್ಗಲಿಲ್ಲ.

ಈಗ ಕೀಚೀ ಮನೆಯ ದೃಶ್ಯ. ಮಿತ್ಸು ಅಲ್ಲಿರುವನು. ಅವರೆಲ್ಲ ಊಟ ಮಾಡುತ್ತಿರುವರು.

ಮಿತ್ಸು : ಜೊತೆಗೆ ಬ್ಯಾಂಕ್‌ನಿಂದ ಅವರು 50 ಸಾವಿರ ಯೆನ್ ಹಣ ಬೇರೆ ತಗೊಂಡಿದ್ದಾರೆ.

ಕೀಚೀ : ನೀನು ಅದೆಲ್ಲ ಹೇಳ್ಬೇಡ...ಸರಿ, ಬಹುಶಃ ಅವರಿಗೊಬ್ಬಳು ಸಂಗಾತಿ ಸಿಕ್ಕಿರಬೇಕು. ಒಂದು ಪಕ್ಷ ಹಾಗೇನಾದ್ರೂ ಸಿಕ್ಕಿದ್ರೇ ಒಳ್ಳೆದೇ ಆಯ್ತು.

ತಾತ್ಸು : ಈಗ; ಈ ವಯಸ್ನಲ್ಲಿ...

ಮಿತ್ಸು : ಆದ್ರೆ ಅದಂತೂ ಖಂಡಿತ ಸಾಧ್ಯವಿಲ್ಲ.

ಕಿಲಚಿ : ಯಾಕೆ ಸಾಧ್ಯವಿಲ್ಲ ? ಅವರಂಥವರೇ ಯಾವಾಗಲೂ ಕಷ್ಟಕ್ಕೊಳಗಾಗುವವರು. ನೋಡು, ಅವರು ಹೆಂಡ್ತೀನ ಕಳಕೊಂಡು ಇಲ್ಲಿಗೆ ಸುಮಾರು ಇಪ್ಪತ್ತು ವರ್ಷಗಳು ಕಳೆದುಹೋದವು. ಮತ್ತೆ ಈಚೆ ಇಪ್ಪತ್ತು ವರ್ಷ ಅವರು ನಿನಗಾಗಿ ಇಷ್ಟೆಲ್ಲ ಮಾಡಿದ್ರು. ಇನ್ನು ಸಹಿಸೋಕಾಗೊಲ್ಲ ಅಂತಾ ಈಗ ಅವರಿಗೆ ಅನಿಸಿದೆ. ಅದಕ್ಕೇ ಅವರು ಮನೆಬಿಟ್ಟು ಹೋಗಿ ತಮಗಾಗಿ ಸಂಗಾತೀನ ಹುಡುಕಿಕೊಂಡಿದ್ದಾರೆ.

ಮಿತ್ಸು : ಅದೆಲ್ಲ ತೀರ ಅಸಂಬದ್ಧ—ಯಾಕಂದ್ರೆ ಅವರಿಗೆ ಆರೋಗ್ಯ ಸರಿಯಾಗಿದ್ದಾಗೆ ಕಾಣೋಲ್ಲ. ಅವರು ತೀರ ಸಣಕಲಾಗಿದ್ದಾರೆ. ಚರ್ಮವೆಲ್ಲ ಒಣಗಿ ಹೋಗಿದೆ. ನೀವು ಈಚೆಗೆ ಅವರನ್ನು ನೋಡಿದೀರಾ ?

ತಾತ್ಸು : ಹೌದು, ನಾಲ್ಕು ದಿನಗಳ ಹಿಂದೆ. ಒಂದು ದಿನ ಬೆಳಿಗ್ಗೆ ಅವರು ಇಲ್ಲಿಗೆ ಬಂದಿದ್ರು. ಯಾವುದೋ ವಿಷಯ ಮಾತಾಡೋಕೆ ಅಂತಾ ಕಾಣ್ಸುತ್ತೆ. ಆದ್ರೆ, ನನ್ನ ಯಜಮಾನರು ಏನೂ ಅಂತ ನಿನ್ಗೆ ಗೊತ್ತು. ಇವರು ಅವರ ಕಡೆ ಒಂದು ಸಾರಿ ಸುಮ್ನೆ ನೋಡಿ. ಬಹುಶಃ ಸಾಲಕ್ಕಾಗಿ ಬಂದಿದಿರೇನು ಅಂತಾ ಕೇಳಿದ್ರು.

ಕೀಚೀ : ಅವರು ಯಾವುದೋ ಹೆಣ್ಣಿನ ವಿಷಯದಲ್ಲಿ ಮಾತ್ನಾಡೋಕೆ ಬಂದಿದಾರೆ ಅಂತಾ ಆಗ ನಾನು ಯೋಚಿಸಿರಲಿಲ್ಲ, ಜೊತೆಗೆ ಅವರು ಆ ವಿಷಯ ಮಾತನಾಡೋಕೆ ಬಂದವರ ಹಾಗೆ ಕೂಡ ಇರ್ಲಿಲ್ಲ.

ತಾತ್ಸು : ನೋಡು, ನಮ್ಮ ಯಜಮಾನರ ಭಾವನೆ ಏನಂದ್ರೆ ಎಲ್ಲ ಗಂಡಸರೂ ತಮ್ಮ ಹಾಗೇ ಕೆಟ್ಟೋರು ಅಂತಾ. ಈಗ್ನೋಡು ಇವರ ಮಾತು; ಅದೇನೇ ಆಗ್ಲಿ, ನಿಮ್ಮ ಮನೇಲಿ ಏನೂ ಸಂಭವಿಸೋದಿಲ್ಲ ಅನ್ನೊ ನಂಬಿಕೆ ನಿನ್ಗಿದೆಯಾ ಮಿತ್ಸು ?

ಮಿತ್ಸು : ಇಲ್ಲ. ಆ ಬಗ್ಗೆ ನಂಗೇನೂ ಗೊತ್ತಾಗ್ತಿಲ್ಲ.

ಅವನು ತನ್ನ ಚಿಕ್ಕಪ್ಪ ಚಿಕ್ಕಮ್ಮರ ಕಡೆಗೆ ನೋಡುವುದಿಲ್ಲ, ಮಾತಿನಿಂದ ಜಾರಿಕೊಳ್ಳುವನು.

ಈಗ ರೈಲ್ವೇ ಕ್ರಾಸಿಂಗಿನ ದೃಶ್ಯ. ಸಂಜೆಯ ಸಮಯ. ಹೆಚ್ಚುಕಮ್ಮಿ ಕತ್ತಲಾಗಿದೆ. ಈಗ ಒಂದು ಕರಿ ನಾಯಿ, ಕತ್ತಲೆಯಲ್ಲಿ ಆಹಾರವನ್ನು ಹುಡುಕುತ್ತಿರುವ ದೃಶ್ಯ. ಈಗ ಒಂದು ಸಣ್ಣ ಪಡಖಾನೆಯ ದೃಶ್ಯ. ಒಳಗೆ ಕೌಂಟರಿನಲ್ಲಿ ವ್ಯಕ್ತಿಯೊಬ್ಬ ಏನನ್ನೋ ಬರೆಯುತ್ತ ಕುಳಿತಿರುವನು. ಒಂದು ಪುಟ ಬರೆದು ಮುಗಿಸಿ ಆತ ಅಂಗಡಿ ಮಾಲೀಕನ ಕಡೆಗೆ ತಿರುಗುವನು.

ಲೇಖಕ : ಇದನ್ನ ನನ್ನ ಮನೆಗೆ ತಗೊಂಡೋಗಿ ಕೊಡ್ತೀಯಾ ? ಪತ್ರಿಕೆಯವನೊಬ್ಬ ಅಲ್ಲಿ ಇದಕ್ಕಾಗಿ ಕಾಯ್ತಿರ್ತಾನೆ. ಮತ್ತೆ, ಹಾಗೇ ವಾಪಸ್ಸು ಬರುವಾಗ ನನ್ಗೆ ಸ್ವಲ್ಪ ನಿದ್ರೆ ಮಾತ್ರೆಗಳನ್ನು ತಗೊಂಡು ಬಾ.

ಮಾಲೀಕ : ಔಷಧಿ ಅಂಗಡಿ, ಬಾಗಿಲಾಕಿದೆಯಲ್ಲ.

ಲೇಖಕ : ಏನು, ಅಷ್ಟೊಂದು ಹೊತ್ತಾಗೋಯ್ತ ?

ಮಾಲೀಕ : ಇಲ್ಲಿಲ್ಲ ಬೇಗ ಅಂಗಡಿ ಬಾಗಲಾಕಿಬಿಡ್ತಾರೆ.

ಲೇಖಕ : ನಾನು ವಿಸ್ಕಿ ಜೊತೆಗೆ ಆ ಮಾತ್ರೆಗಳನ್ನು ತಗೊಳ್ಳದಿದ್ರೆ ನನ್ಗೆ ನಿದ್ದೆ ಬರೋದಿಲ್ಲ.

ಆತ ಅಂಗಡಿ ಮಾಲೀಕನ ಕೈಗೆ ಒಂದು ಪುಟವನ್ನು ಕೊಡುವನು. ಹಸ್ತಪ್ರತಿಯ ಉಳಿದ ಪುಟಗಳನ್ನು ತನ್ನ ಕೈಯಲ್ಲೇ ಮುದುರಿಟ್ಟುಕೊಳ್ಳುವನು.

ವಾಟನಬಿ ಕತ್ತಲ ಮೂಲೆಯಲ್ಲಿ ಕುಳಿತಿರುವ ದೃಶ್ಯ, ಆತ ಕತ್ತಲಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿಲ್ಲ. ಆತ ಮೇಲೆದ್ದು ಲೇಖಕನ ಹತ್ತಿರಕ್ಕೆ ನಡೆದು ಬರುವನು.

ವಾಟನಬಿ : ಕ್ಷಮಿಸಿ, ನಾನು ನಿಮ್ಗೆ ಕೆಲವು ಮಾತ್ರೆಗಳನ್ನು ಕೊಡಬಹುದು.

ಆತ ಕೌಂಟರಿನ ಮೇಲೆ, ಲೇಖಕನ ಮುಂದೆ ನಿದ್ರಾಮಾತ್ರೆಗಳಿರುವ ಶೀಸೆಯನ್ನು ಇಡುವನು, ಅನಂತರ ತನ್ನ ಟೇಬಲ್ಲಿಗೆ ವಾಪಸಾಗುವನು. ಅಂಗಡಿಯ ಮಾಲಿಕ ಹೊರಗೆ ಹೋಗುವನು, ಕರಿನಾಯಿ ಒಳಗೆ ಓಡಿ ಬರುವುದು.

ಲೇಖಕ : ಧನ್ಯವಾದಗಳು, ನಾನಿವನ್ನ ಅಂಗಡಿ ರೇಟಿಗೆ ಕೊಂಡುಕೊಳ್ಳಬಹುದೇ ?

ವಾಟನಬಿ : ಓವ್, ಹೇಗೂ ನಾನು ಅವನ್ನ ಬಿಸಾಕಬೇಕು ಅನ್ನೋ ಯೋಚನೇಲಿದ್ದೆ.

ಲೇಖಕ : ಹಾಗಾದ್ರೆ, ನೀವು ಕುಡದದ್ದಕ್ಕೆ ನಾನು ಹಣ ಕೊಡ್ತೇನೆ. ನೀವು ಚನ್ನಾಗಿ ಕುಡಿಯೋ ಜನ ಅನ್ಸುತ್ತೆ, ಹೌದೇನು ? ತಗೊಳ್ಳಿ ಇನ್ನು ಸ್ವಲ್ಪ ಕೊಡ್ತೇನೆ.

ವಾಟನಬಿ : ಬೇಡಿ, ನನಗಿನ್ನಾಗೋಲ್ಲ...ನಾನೀಗ್ಯಾನೆ ಇದ್ದದ್ದೆಲ್ಲವನ್ನೂ ಚೆಲ್ಲಿದೆ. ನನಗೆ ಗ್ಯಾಸ್ಟ್ರಿಕ್ ಕ್ಯಾನ್ಸರ್ ಇದೆ.

ಲೇಖಕ : (ವ್ಯಾಕುಲಗೊಂಡು) ಕ್ಯಾನ್ಸರ್ ?

ವಾಟನಬಿ : ಹೌದು.

ಲೇಖಕ : ಹಾಗಿದ್ಮೇಲೆ ನೀವು ಈ ರೀತಿ ಕುಡಿಬಾರ್ದು.

ಆತ ವಾಟನಬಿಯ ಭುಜದ ಮೇಲೆ ಕೈ ಇಡುವನು.

ವಾಟನಬಿ : ನಿಜಕ್ಕೂ ಇದರ ಬಗ್ಗೆ ಮಾತಾಡೋಕ್ಕೆ ನನ್ಗೆ ಇಷ್ಟವಿಲ್ಲ.

ಲೇಖಕ : ಆದರೆ, ನಿಮಗೆ ಕ್ಯಾನ್ಸರ್ ಇದೇ ಅಂತಾ ಗೊತ್ತಿದ್ದೂ ಕುಡಿಯೋದು ಅಂದ್ರೆ...ಆತ್ಮಹತ್ಯೆ ಮಾಡಿಕೊಂಡ ಹಾಗೇನೆ.

ಲೇಖಕ ವಾಟನಬಿಯನ್ನು ನೋಡುತ್ತಿರುವ ದೃಶ್ಯ. ಈಗ ವಾಟನಬಿಯ ದೃಶ್ಯ.

ವಾಟನಬಿ : ಇಲ್ಲ, ಅದು ಅಷ್ಟೊಂದು ಸುಲಭವಲ್ಲ. ಇದಕ್ಕೆಲ್ಲ ಮುಕ್ತಾಯ ಕಾಣಿಸಿ ಬಿಡ್ಬೇಕು ಅಂತಾ ನಾನು ಯೋಚ್ಸಿದೆ; ಆದ್ರೆ ಸಾಯೋದು ಬಹಳ ಕಷ್ಟ. ಮತ್ತೆ, ನನ್ಗೆ ಈಗ್ಲೆ ಸಾಯೋಕೆ ಇಷ್ಟವಿಲ್ಲ. ಇಷ್ಟು ವರ್ಷಗಳಿಂದ ನಾನು ಯಾತಕ್ಕಾಗಿ ಬದುಕಿದೀನಿ ಅನ್ನೋದು ನನ್ಗೆ ಗೊತ್ತಿಲ್ಲ.

ಲೇಖಕನ ದೃಶ್ಯ.

ಲೇಖಕ : ನಿಮಗೆ ಮಕ್ಕಳು ಯಾರಾದ್ರೂ ಇದಾರ ? (ಅವನಿಗೆ ಉತ್ತರ ಸಿಗುವುದಿಲ್ಲ) ಮತ್ತೆ, ನಿಮ್ಗೆ ಹೊಟ್ಟೆ ನೋಯುತ್ತೇನು ?

ವಾಟನಬಿಯ ದೃಶ್ಯ.

ವಾಟನಬಿ : ಹೊಟ್ಟೇನೋವಿಗಿಂತ ಹೆಚ್ಚು ನೋವಾಗ್ತಿರೋದು ಇಲ್ಲಿ...
(ಆತ ಎದೆಯನ್ನು ಒತ್ತಿಕೊಳ್ಳುವನು)

ಲೇಖಕ : ಮತ್ತೆ, ಇಷ್ಟಕ್ಕೆಲ್ಲ ಏನಾದರೂ ಕಾರಣವಿರಲೇಬೇಕು.

ಇಬ್ಬರನ್ನು ಒಳಗೊಂಡಂತೆ ಒಂದು ದೃಶ್ಯ.

ವಾಟನಬಿ : ಇಲ್ಲ, ನಾನೊಬ್ಬ ಶತಮೂರ್ಖ, ಅಷ್ಟೆ. (ಆತ ತಾನಾಗಿಯೇ ಒಂದು ಲೋಟ ಮದ್ಯ ಸುರಿದುಕೊಂಡು ಕುಡಿಯುವನು). ನನ್ಗೆ...ನನ್ಮೇಲೆ ನನ್ಗೇ ಸಿಟ್ಟು. ನಾನು ಕುಡಿಯೋಕೆ ಶುರು ಮಾಡಿ ಕೆಲವು ದಿನಗಳಾಯ್ತು; ಅಲ್ಲೀವರೆಗೂ ನಾನು ಕುಡಿತಕ್ಕೇ ಅಂತ ಒಂದು ಕಾಸ್‌ಕೂಡ ಖರ್ಚು ಮಾಡಿದವನಲ್ಲ. ನಾನಿನ್ನು ಹೆಚ್ಚು ದಿನ ಬದುಕೋದಿಲ್ಲ ಅಂತಾ ಗೊತ್ತಾದ

ಮೇಲೆ ಇದೆಲ್ಲ ಶುರುವಾದದ್ದು. (ಆತ ಇನ್ನೊಂದು ಲೋಟ ಮದ್ಯವನ್ನು ಸುರಿದುಕೊಳ್ಳುವನು).

ಲೇಖಕ : ನನ್ಗೆ ಅರ್ಥವಾಗುತ್ತೆ, ಆದ್ರೂ ನೀವು ಕುಡಿಬಾರ್ದು. ಕುಡಿಯೋದು ನಿಮಗೆ ರುಚಿಸಂತ್ತಾ ?

ವಾಟನಬಿ : ಇಲ್ಲ, ಖಂಡಿತ ಇಲ್ಲ. (ಆತ ತನ್ನ ಲೋಟ ಕೆಳಗಿಡುವನು). ಆದರೆ ಇದು ನನ್ನನ್ನ ನಾನು ಮರೆಯೊ ಹಾಗೆ ಮಾಡುತ್ತೆ...ಈಗ ನಾನು ಇಷ್ಟು ದುಬಾರಿ ಬೆಲೆಯ ಮದ್ಯವನ್ನು ಕುಡೀತಿರೋದು ಯಾಕೆ ಅಂದ್ರೆ...ಯಾಕಂದ್ರೆ ನಾನು ಹಿಂದೆಂದೂ ಕುಡ್ದಿರ್ಲಿಲ್ಲ. ಇದನ್ನ ಕುಡಿದ್ರೆ ವಿಷಾ ಕುಡಿದ ಹಾಗೇ ಅನ್ಸುತ್ತೆ. ಇದೂ ವಿಷದ ಹಾಗೇ ಕಾಣುತ್ತೆ ; ಅನ್ನೋದು ನನ್ನ ಮಾತಿನರ್ಥ. ಆದ್ರೆ ಇದು ಮನಸ್ಸನ್ನ ಶಾಂತಗೊಳಿಸುತ್ತೆ. (ಆತ ನಗುವನು).

ಲೇಖಕ : ನಿಮ್ಮ ಅನಿಸಿಕೆ ಏನೂ ಅನ್ನೋದು ನನ್ಗೆ ಗೊತ್ತು.

ವಾಟನಬಿ ತಿನ್ನದೇ ಬಿಟ್ಟಿರುವ ಸ್ವಲ್ಪ ಊಟ ಟೇಬಲ್ ಮೇಲಿದೆ. ಆತ ನಾಯಿಯನ್ನು ನೋಡುವನು, ಆ ಊಟವನ್ನು ನೆಲದ ಮೇಲೆ ಸುರಿಯುವನು, ನಾಯಿ ಬಂದು ಅದನ್ನು ಗಬಗಬನೆ ತಿಂಗುಕೊಳ್ಳುವುದು. ಈಗ ಮತ್ತೆ ಅವರಿಬ್ಬರ ದೃಶ್ಯ.

ವಾಟನಬಿ : ನನ್ನ ಬಳಿ 50 ಸಾವಿರ ಯೆನ್ ಹಣವಿದೆ. ಸಂತೋಷವಾಗಿ ಕಾಲ ಕಳೆಯುವುದಕ್ಕೆ ನಾನಿದನ್ನು ಖರ್ಚು ಮಾಡ್ಬೇಕೂ ಅಂತಿದೀನಿ. ಆದರೆ, ಇದನ್ನ ಒಪ್ಕೊಳೋಕ್ಕೆ ನನ್ಗೆ ನಾಚಿಕೆ ಅನ್ಸುತ್ತೆ ; ಈ ಹಣಾನ ಹೇಗೆ ಖರ್ಚು ಮಾಡ್ಬೇಕು ಅಂತಾನೇ ನನ್ಗೆ—ಗೊತ್ತಿಲ್ಲ. ನಿಮಗೆ ಗೊತ್ತಿದ್ರೆ ಸ್ವಲ್ಪ...

ಲೇಖಕ : ನೀವೀ ಹಣಾನ ಹೇಗೆ ಖರ್ಚು ಮಾಡ್ಬೇಕು, ಅದನ್ನು ನಾನು ನಿಮಗೆ ತೋರಿಸಿಕೊಡ್ಬೇಕು—ಇದೇ ತಾನೆ ನೀವು ನನ್ನನ್ನು ಕೇಳ್ತಿರೋದು ?

ಹತ್ತಿರದಲ್ಲೇ ರೈಲೊಂದು ಹಾದುಹೋಗುವುದು. ಅಂಗಡಿ ಮತ್ತು ಅಂಗಡಿಯಲ್ಲಿರುವ ಶೀಶೆಗಳು ನಡುಗಿ ಅಲ್ಲಾಡುವುವು.

ವಾಟನಬಿ : ಹೌದು, ನಾನು ನಿಮ್ಮನ್ನ ಕೇಳ್ಬೇಕು ಅಂತಾ ಇದ್ದುದು ಅದನ್ನೆ.

ಲೇಖಕ : ಆದ್ರೆ...

ವಾಟನಬಿ : ಈ ಹಣಾನ ಕೂಡಿಸೋಕೆ ನನ್ಗೆ ಬಹಳ ಕಾಲ ಹಿಡಿತು, ಆದರೆ ನಾನೀಗ ಇದನ್ನ ಖರ್ಚು ಮಾಡಬಹುದು ಅನ್ನೋದು ನನ್ನ ಅಭಿಪ್ರಾಯ.

ಈ ಸಂಭಾಷಣೆ ನಡೆಯುತ್ತಿರುವ ವೇಳೆಯಲ್ಲಿ ಕ್ಯಾಮರಾ ಒಮ್ಮೆ ವಾಟನಬಿಯ ಮೇಲೆ ಇನ್ನೊಮ್ಮೆ ಲೇಖಕನ ಮೇಲೆ—ಹೀಗೆ ಅತ್ತಿಂದಿತ್ತ ಚಲಿಸುತ್ತಿರುವುದು.

ಲೇಖಕ : ನನ್ಗೆ ಅರ್ಥವಾಗುತ್ತೆ. ನೋಡಿ, ನಿಮ್ಮ ಹಣ ನಿಮ್ಮ ಬಳಿ ಇರ್ಲಿ. ಈ ರಾತ್ರಿ ನೀವು ನನ್ನ ಅತಿಥಿ. ಎಲ್ಲ ವಿಷಯ ನನ್ಗೆ ಬಿಡ್ಬೇಡಿ (ವಿಸ್ಕಿಬಾಟಲ್ ತರಲು ಆತ ಪಕ್ಕದ ಟೇಬಲ್ ಹತ್ತಿರಕ್ಕೆ ಎದ್ದು ಹೋಗುವನು, ಬಾಟಲ್ ತೆಗೆದುಕೊಳ್ಳುವನು, ಪುನಃ ಬಂದು ಕುಳಿತುಕೊಳ್ಳುವನು. ಆತ ವಾಟನಬಿಯನ್ನು ತೀರ ಸನಿಹದಿಂದ ನೋಡುವನು.) ನೋಡಿ, ನೀವು ಬಹಳ ಸ್ವಾರಸ್ಯದ ವ್ಯಕ್ತಿ. ನನಗೆ ಗೊತ್ತು, ನಾನೊಬ್ಬ ಅಸಂಸ್ಕೃತ, ಆದರೆ ನಿಜಕ್ಕೂ ನೀವು ಬಹಳ ಸ್ವಾರಸ್ಯಕರ ವ್ಯಕ್ತಿ. ನಾನೊಬ್ಬ ಕೇವಲ ಜೀತದ ಲೇಖಕ, ಕಚಡ ಕಾದಂಬರಿಗಳನ್ನು ಬರೀತೀನಿ. ಆದರೆ ನೀವು, ಈ ರಾತ್ರಿ ನಿಜಕ್ಕೂ ನನ್ನನ್ನ ಯೋಚಿಸೊ ಹಾಗೆ ಮಾಡಿದ್ರಿ. (ಆತ ತಾನೇ ಒಂದು ಲೋಟ ವಿಸ್ಕಿ ಸುರಿದುಕೊಳ್ಳುವನು) ನನಗನ್ನಿಸತ್ತೆ ಕೇಡಿನಲ್ಲೂ ಏನೊ ಒಂದು ಒಳ್ಳೇದಿದೆ ಅಂತಾ—ಮನುಷ್ಯ ದುರಾದೃಷ್ಟದಲ್ಲೇ ಸತ್ಯವನ್ನು ಕಂಡುಕೊಳ್ತಾನೆ. ನಿಮಗಿರೊ ಕ್ಯಾನ್ಸರ್ ನೀವು ಜೀವನವನ್ನು ಅನುಭವಿಸೋ ಹಾಗೆ ಪ್ರೇರೇಪಿಸಿತು (ಆತ ವಿಸ್ಕಿ ಕುಡಿಯುವನು). ಮನುಷ್ಯ ಒಬ್ಬ ಮಹಾಮೂರ್ಖ. ಸದಾ ಹೀಗೇನೆ, ತಾನಿನ್ನೇನು ಎಲ್ಲವನ್ನೂ ತ್ಯಜಿಸಿ ಹೋಗಬೇಕಾಗಿ ಬಂದಾಗ ಜೀವನ ಎಷ್ಟೊಂದು ಸುಂದರವಾಗಿದೆ ಎಂಬ ಸತ್ಯವನ್ನು ಕಂಡ್ಕೊಳ್ತಾನೆ. ಇಷ್ಟಾದರೂ ಈ ಸತ್ಯವನ್ನು ಅರಿತುಕೊಳ್ಳೋ ಜನ ಬಹಳ ಕಡಿಮೆ. ಜೀವನ ಅಂದ್ರೆ ಊನು ಅಂತಾ ತಿಳಿದೀನೇ ಕೆಲವರು ಸತ್ಹೋಗ್ತಾರೆ. ನೀವು ನಿಜಕ್ಕೂ ದೊಡ್ಡ ವ್ಯಕ್ತಿ ; ಯಾಕಂದ್ರೆ ನೀವು ಸಾವಿನ ಜೊತೆ ಹೋರಾಟ್ತಿದೀರಿ —ಇದು ನನಗೆ ತುಂಬಾ ಹಿಡಿಸ್ತು. ಈ ಸದ್ಯದ ಕ್ಷಣದ ವರೆಗೆ ನೀವು ಜೀವನದ ಗುಲಾಮರಾಗಿದ್ರಿ ; ಆದ್ರೆ ಈಗ, ಇನ್ನು ನೀವು ಅದರ ಯಜಮಾನರಾಗ್ತಿರಿ. ಮತ್ತೆ, ಜೀವನವನ್ನು ಅನುಭವಿಸೋದು ಮನುಷ್ಯನ ಕರ್ತವ್ಯ, ಅನುಭವಿಸದೇ ಇರೋದು ಪ್ರಕೃತಿಗೆ ವಿರುದ್ಧವಾದದ್ದು. ಮನುಷ್ಯನಿಗೆ ಯಾವಾಗ್ಲೂ ಬದುಕಿನ ಬಗ್ಗೆ ಲಾಲಸೆ ಇರ್ಬೇಕು. ಈ ಲಾಲಸೆ ಇರ್ಬಾರ್ದು, ಅದು ಅನೀತಿ ಅಂತಾ ಕಾಲಾನುಕಾಲದಿಂದ ನಮಗೆ ಹೇಳಿಕೊಂಡು ಬಂದಿದ್ದಾರೆ, ಆದರೆ ಈ ಅಭಿಪ್ರಾಯ ತಪ್ಪು. ಜೀವನದ ಬಗ್ಗೆ ಲಾಲಸೆ ಇಟ್ಟುಕೊಳ್ಳೋದು ಕೂಡ ಸದ್ಗುಣವೇ (ಅವರಿಬ್ಬರೂ ಬಾಗಿಲವರೆಗೂ ನಡೆದು ಬಂದಿರುವರು ; ರೈಲು ಹಾದು ಹೋಗುತ್ತಿರುವ ಶಬ್ದ.) ನಾವಿನ್ನು ಹೋಗೋಣ. ನೀವು ತಿರಸ್ಕರಿಸಿ ಎಸೆದಿದ್ದ ಬದುಕನ್ನ ಪತ್ತೆ ಮಾಡೋಣ. ಈ ರಾತ್ರಿಗೆ ನಾನು ನಿಮ್ಮ ಮೆಫಿಸ್ಟಾಫಲೀಸ್, ಅಂದ್ರೆ ಪಾಪಪುರುಷ ಆಗ್ತೀನಿ. ಆದರೆ ಈ ಪಾಪಪುರುಷ ನಿಮ್ಮ ಬಳಿ ಹಣ ಕೇಳೋನಲ್ಲ.

(ಫೌಸ್ಟ್ ಎಂಬುವನು ತನ್ನ ಆತ್ಮವನ್ನು ಯಾರಿಗೆ ಮಾರಿಕೊಂಡನೋ ಆ ಪಾಪಪುರುಷ ; ನರಪಿಶಾಚಿ) (ಆತ ತನ್ನ ಪಾದದ ಕಡೆಗೆ ನೋಡುವನು.) ಇಲ್ನೋಡಿ, ನಮ್ಮ ಜೊತೆಗೆ ಕರಿನಾಯಿ ಬೇರೆ ಇದೆ!

ಲೇಖಕ ನಾಯಿಯನ್ನು ಜಾಡಿಸಿ ಒದೆಯುವನು ; ಅದು ಕುಯ್ಯೋ ಮುರ್ರೋ ಎಂದು ಗೋಳಾಡುವುದು. ಅದೇ ಹೊತ್ತಿನಲ್ಲಿ ಕಿನ್ನರ ಸಂಗೀತದ ಧ್ವನಿ.

ಈಗ ಪಿನ್‌ಬಾಲ್ ಯಂತ್ರದ ಕ್ಲೋಸ್ ಅಪ್ ದೃಶ್ಯ. ಸಂಗೀತದ ಧ್ವನಿಗೆ ತಾಳ ಹಾಕಿದಂತೆ ಚೆಂಡು ಪುಟ ನೆಗೆಯುತ್ತಿದೆ. ಅವರಿಬ್ಬರೂ ಪಿನ್‌ಬಾಲ್ ಪಾರ್ಲರ್‌ನಲ್ಲಿ ಇರುವ ದೃಶ್ಯ.

ಲೇಖಕ : ಈ ಚಿಕ್ಕ ಸಿಲ್ವರ್ ಬಾಲ್ ನೋಡಿದ್ರೇನು ? ಈ ಬಾಲ್ ನೀವೆ: ಅದು ನಿಮ್ಮ ಜೀವನ. ಓಹ್, ಇದೊಂದು ಮಹಾನ್ ಯಂತ್ರ, ಈ ಮಹಾನ್ ಯಂತ್ರ ನಿಮ್ಮ ಜೀವನದ ಎಲ್ಲ ಸಂಕಷ್ಟಗಳನ್ನು ಮರೆಸುತ್ತೆ, ನೀವು ಕೇಳದೇ ಕನಸುಣಿಸೋ ವ್ಯಾಪಾರಿ ಇದು.

ಅವರಿಬ್ಬರೂ ಪಿನ್‌ಬಾಲ್ ಯಂತ್ರದಲ್ಲಿ ಆಡುತ್ತಿರುವ (ಮಧ್ಯಮಶಾಟ್) ದೃಶ್ಯ. ವಾಟನಬೆ ಉದ್ರೇಕಗೊಂಡವನ ಹಾಗೆ ಕಾಣುತ್ತಿದ್ದಾನೆ.

ಆ ದೃಶ್ಯ ಮರೆಯಾಗಿ ಈಗ ಅವರಿಬ್ಬರಿಗೂ ಬಿಯರ್ ಕುಡಿತದ ದೊಡ್ಡ ಕೋಣೆಯೊಂದರಲ್ಲಿರುವ ದೃಶ್ಯ. ಅವರಿಬ್ಬರೂ ಕುಳಿತಿರುವರು. ಎದುರಿಗೆ ದೊಡ್ಡ ಬಿಯರ್ ಮಗ್ಗುಗಳಿವೆ. ಲೇಖಕ ಏನನ್ನೋ ಮಾತಾಡಬೇಕೆನ್ನುವಷ್ಟರಲ್ಲಿ, ಮೇಲೇಳು ತ್ತಿರುವ ವಾಟನಬೆಯ ತಲೆ ಮುಟ್ಟುವ ಮಟ್ಟಕ್ಕೆ ಇದ್ದಕ್ಕಿದ್ದಂತೆ ಬ್ಯಾಂಡಿನವರ ಟ್ರಾಂಬೋನ್ (ತುತೂರಿ) ಚಾಚಿಕೊಳ್ಳುವವು. ಕಿವಿಗಡಚಿಕ್ಕುವ ಸಂಗೀತ ಆರಂಭ ವಾಗುವುದು.

ಆ ದೃಶ್ಯ ಮರೆಯಾಗಿ ಈಗ ಬೀದಿಯ ದೃಶ್ಯ. ಗುಂಪಿನಲ್ಲಿ ವಾಟನಬೆ ಮತ್ತು ಲೇಖಕನ ಮೇಲೆ ಕ್ಯಾಮೆರಾ ಅನೇಕ ಬಾರಿ ಶೀಘ್ರವಾಗಿ ಚಲಿಸುವುದು. ಕಣ್ಣುಕುಕ್ಕುವ ನಿಯಾನ್ ದೀಪಗಳ ಹಿಂದಿನಿಂದ ಮತ್ತು ಮುಳ್ಳುತಂತಿ ಬೇಲಿಗಳ ಹಿಂದಿನಿಂದ ಕೆಲವು ದೃಶ್ಯಗಳು. ಹುಡುಗಿಯೊಂದು ಓಡುತ್ತ ಬಂದು ವಾಟನಬೆಯ ಹ್ಯಾಟನ್ನು ಕಿತ್ತುಕೊಂಡು ಓಡಿಹೋಗುವಳು. ಆತ ಹಿಂದಿರುಗಿ ಅವಳನ್ನು ಅಟ್ಟಿಸಿ ಕೊಂಡು ಹೋಗಬೇಕೆನ್ನುವಷ್ಟರಲ್ಲಿ ಲೇಖಕ ವಾಟನಬೆಯನ್ನು ತಡೆಯುವನು.

ಲೇಖಕ : ಬೇಡ...ಪರರನ್ನು ಶೋಷಿಸಿ ಜೀವಿಸೋ ಸಸ್ತನಿ ವರ್ಗದ ಜೀವಿಗಳು ಅಂದ್ರೆ ಈ ಹುಡುಗಿಯರು. ಈಗ ಕಳಕೊಂಡಿರೋ ಹ್ಯಾಟ್‌ನ ಪುನಃ ಪಡೀಬೇಕು

ಅಂದ್ರೆ ನಿಮ್ಗೆ ಆ ಹ್ಯಾಟ್‌ನ ಬೆಲೆಗಿಂತ ಹೆಚ್ಚು ಹಣ ವ್ಯಯವಾಗುತ್ತೆ. ಮತ್ತೆ ಅದು ಹಾಗಿರಲಿ, ನಿಮಗೆ ಬೇಕೂ ಅನ್ನಿದ್ರೆ ನೀವು ಒಂದು ಡಜನ್ ಹ್ಯಾಟ್ ಕೊಂಡುಕೊಳ್ಳಬಹುದು. ನಾವೀಗ ಹೊಸ ಹ್ಯಾಟ್ ತಗೋಳ್ಳೋಕೆ ಹೋಗ್ತಿದೀವಿ, ಜೊತೆಗೆ ನಿಮ್ಮ ಹಳೇ ಜೀವನಕ್ಕೆ ವಿದಾಯ ಹೇಳಲು ಕೂಡ.

ತೆರೆದ ಪರದೆಯ ಮೂಲಕ ಅವರಿಬ್ಬರೂ ಬಾರ್ ಒಳಗೆ ನೋಡುತ್ತಿರುವ ದೃಶ್ಯ.

ಈಗ ಅವರಿಬ್ಬರೂ ಬಾರ್‌ನ ಬಾಗಿಲ ಬಳಿ ಇರುವ ದೃಶ್ಯ. ವಾಟನಬಿಯು ಹೊಸ ಹ್ಯಾಟನ್ನು ಸರಿಪಡಿಸಲು ಲೇಖಕ ನಿಲ್ಲುವ ದೃಶ್ಯ. ಅವರಿಬ್ಬರೂ ಬಾರ್ ಒಳಗೆ ಬರುತ್ತಿರುವ ದೃಶ್ಯದ ಮಧ್ಯಮ ಕ್ಲೋಸ್–ಅಪ್.

ರೆಕಾರ್ಡ್ ಪ್ಲೇಯರ್‌ನಿಂದ ಜೋಸೆಫಿನ್ ಬೇಕರನ ಒಂದು ಧ್ವನಿಮುದ್ರಿಕೆಯ ಸಂಗೀತ ಕೇಳಿಬರುತ್ತಿದೆ. ಬಾರ್‌ನ ಯಜಮಾನಿ ಹಾಗೂ ಪರಿಚಾರಕ ನಗುತ್ತ ನಿಂತಿರುವರು. ಆಕೆ ಅವರನ್ನು ಸ್ವಾಗತಿಸುವಳು, ಬಹಳ ದಿನಗಳಾಯ್ತು ನೀವು ಬಂದು ಎನ್ನುವಳು. ಅವರಿಬ್ಬರೂ ಬಾರ್ ಕೌಂಟರ್ ಬಳಿ ಕುಳಿತುಕೊಳ್ಳುವರು. ವಾಟನಬಿಯು ಹೊಸ ಹ್ಯಾಟನ್ನು ತನ್ನ ಮುಂದೆ ಇಟ್ಟುಕೊಂಡಿರುವನು. ಆಕೆ ಅವನಿಂದ ಅದನ್ನು ಎತ್ತಿಕೊಳ್ಳಲು ಪ್ರಯತ್ನಿಸುತ್ತಿದ್ದಂತೆಯೇ ಆತ ಅನುಮಾನದಿಂದ ಹ್ಯಾಟನ್ನು ಥಟ್ಟನೆ ತೆಗೆದುಕೊಂಡು ತಲೆಗೆ ಹಾಕಿಕೊಳ್ಳುವನು. ಲೇಖಕ ನಗುವನು. ಆಕೆ ಮಂದಹಾಸ ಬೀರುವಳು.

ಈಗ ಕ್ಯಾಮರ ಮೀಡಿಯಂ ಕ್ಲೋಸ್–ಅಪ್‌ನಲ್ಲಿ ಬಾರ್ ಯಜಮಾನಿಯ ಮೇಲೆ ಕೇಂದ್ರಿಕೃತವಾಗಿದೆ. ಆಕೆಯ ಬೆನ್ನ ಹಿಂಬದಿಯಲ್ಲಿರುವ ಕನ್ನಡಿಯಲ್ಲಿ ಲೇಖಕನ ಪ್ರತಿಬಿಂಬ ಕಾಣುತ್ತಿದೆ.

ಲೇಖಕ : ತಮಾಷೆ ಏನು ಗೊತ್ತಾ ? ಈ ಮನುಷ್ಯ ಇದಾರಲ್ಲ, ಇವರ್ಗೆ ಗ್ಯಾಸ್ಟ್ರಿಕ್ ಕ್ಯಾನ್ಸರ್.

ಯಜಮಾನಿ : ಹಾಗಾದ್ರೆ ಅವರು ಕುಡಿತಾರೇನು ? ಖಂಡಿತ ಕುಡಿಯೋದಿಲ್ಲ.

ಲೇಖಕ : ಅಯ್ಯೊ ಗುಗ್ಗು—ನಿನ್ನ ಅಭಿಪ್ರಾಯ ತಪ್ಪು. ಅವರನ್ನ ಒಮ್ಮೆ ಚನ್ನಾಗಿ ಗಮನಿಸಿ ನೋಡು. ನೋಡು ಅವರು ದೇವರು, ಕ್ಯಾನ್ಸರೇ ಅವರು ಹೊತ್ತಿರೋ ಕ್ರಾಸ್. ಬಹಳಷ್ಟು ಜನ ತಮಗೆ ಕ್ಯಾನ್ಸರ್ ಇದೇ ಅಂತಾ ಗೊತ್ತಾದ ಕ್ಷಣವೇ ಸತ್ಹೋಗ್ತಾರೆ. ಆದರೆ ಇವರು ಹಾಗಲ್ಲ. ಇವರೇ ಬೇರೆ ತರ. ಆ ಕ್ಷಣದಿಂದ ಇವರು ಬದುಕೋಕೆ ಪ್ರಾರಂಭಿಸಿದರು.

ಆಕೆ ಪುನಃ ಮಂದಹಾಸ ಬೀರುವಳು, ಕ್ಯಾಮರ ಅವರಿಂದ ದೂರ ಸರಿದು ಬಾರ್ ಕೌಂಟರ್ ಹಿಂದಿನ ಕನ್ನಡಿಯ ಮೇಲೂ ಅವರ ಗ್ಲಾಸುಗಳ ಮೇಲೂ

ಚಲಿಸುತ್ತಿರುವುದು. ವಾಟನಬಿಯ ತಲೆಯ ಮೇಲೆ ಈಗ ಹ್ಯಾಟ್ ಧರಿಸಿರುವನು, ಆದರೆ ಅವನ ತಲೆ ಬಾರ್ ಕೌಂಟರಿನ ಮೇಲೆ ಒರಗಿದೆ.

ಲೇಖಕ : ಈ ರೀತಿ ಮಾಡಿದ್ದು ಸರಿಯಲ್ವೇನು ?

ವಾಟನಬಿ ನಿಧಾನವಾಗಿ ತಲೆ ಎತ್ತುವನು. ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ವನ್ನು ಕಾಣುವನು, ಇದ್ದಕ್ಕಿದ್ದಂತೆ ನಗುವನು.

ಈಗ ನಿಯಾನ್ ದೀಪಗಳಿಂದ ಜಗಮಗಿಸುವ ಕ್ಯಾಬರೆ ಮಂದಿರ ದೃಶ್ಯ. ಮಹಡಿಯ ಕಟಕಟೆಯ ಮೇಲೆ ಕ್ಯಾಮರ ಹೊಯ್ದಾಡುತ್ತಿರುವುದು ; ಮಹಡಿಯ ಮೇಲೆ ವಾಟನಬಿ ಮತ್ತು ಲೇಖಕ ಗುಂಪಿನಲ್ಲಿ ನೂಕಾಡುತ್ತ ಜಾಗ ಮಾಡಿಕೊಂಡು ಬರುತ್ತಿರುವರು. ದಂಪತಿಗಳ ಒಂದು ಜೋಡಿ ತೀರ ಹತ್ತಿರ ಹತ್ತಿರ ನಿಂತು ನರ್ತನ ಮಾಡುತ್ತಿರುವುದು. ವಾಟನಬಿ ಅವರು ನರ್ತಿಸುವುದನ್ನೇ ತದೇಕಚಿತ್ತನಾಗಿ ನೋಡುತ್ತ ನಿಂತುಬಿಡುವನು ; ಲೇಖಕ ಅವನನ್ನು ಎಳೆದು ಕೊಂಡೊಯ್ಯುವನು.

ಈಗ ಮೇಲು ಅಂತಸ್ತಿನ ದೃಶ್ಯ. ಪಿಯಾನೊ ಬಾರಿಸುವವರ ಮತ್ತು ಸಂಗೀತ ನುಡಿಸುತ್ತಿರುವವರ ಕ್ಲೋಸ್-ಅಪ್ ದೃಶ್ಯ. ಬಿಯರ್ ಕುಡಿಯುತ್ತಿರುವ ಪಿಯಾನೊ ವಾದಕನ ಕ್ಲೋಸ್-ಅಪ್ ; ನರ್ತಿಸುತ್ತಿರುವ ನರ್ತಕಿಯರ ಕ್ಲೋಸ್-ಅಪ್. ಆಕೆ ವಾಟನಬಿಯ ಹ್ಯಾಟನ್ನು ಎತ್ತಿಕೊಂಡು, ತನ್ನ ತಲೆಯ ಮೇಲೆ ಹಾಕಿಕೊಂಡು ಕೋಣೆಯ ಸುತ್ತ ನರ್ತಿಸುವಳು. ಪಿಯಾನೊ ಕೀಗಳ ಕ್ಲೋಸ್-ಅಪ್ ; ಪಿಯಾನೊ ಮೇಲೆ ಗೋಡೆಗೆ ಹಾಕಿರುವ ದೊಡ್ಡ ಕನ್ನಡಿಯ ಕ್ಲೋಸ್-ಅಪ್ ; ನರ್ತಕಿಯ ನರ್ತನದ ಕ್ಲೋಸ್-ಅಪ್ ; ಆಕೆಯ ಹಿಂದಿಂದೆಯೆ ಇಡೀ ಕೋಣೆಯನ್ನು ಸುತ್ತುತ್ತಿರುವ ವಾಟನಬಿಯ ಕ್ಲೋಸ್‌ಅಪ್ ; ಹೊಯ್ದಾಡುತ್ತಿರುವ ಮಣಿಸರದ ಪರದೆಯ ಹಿಂದೆ ನಗುತ್ತಿರುವ ಪಿಯಾನೊ ವಾದಕನ ನಗುವಿನ ಕ್ಲೋಸ್-ಅಪ್. ಕಡೆಗೂ ವಾಟನಬಿ ತನ್ನ ಹ್ಯಾಟನ್ನು ವಾಪಸು ಪಡೆಯುವನು. ನರ್ತಕಿ ನರ್ತಿಸುವುದನ್ನು ನಿಲ್ಲಿಸಿ ಪಿಯಾನೊ ಕೀಗಳ ಮೇಲೆ ಒರಗುವಳು ; ಪಿಯಾನೊ ವಾದಕ ಜನರ ಕಡೆಗೆ ತಿರುಗಿ ನಿಲ್ಲುವನು.

ಪಿಯಾನೊ ವಾದಕ : ಮಹಾಜನರೇ ನಿಮ್ಮದೇನಾದರೂ ಕೋರಿಕೆ ಇದೆಯೇನು ?

ನರ್ತಕಿ ಎದ್ದುಬಂದು ವಾಟನಬಿಯ ತೊಡೆಯ ಮೇಲೆ ಕೂರುವಳು.

ವಾಟನಬಿ : 'ಜೀವನ ಬಲು ಕ್ಷಣಿಕ'

ಪಿಯಾನೊ ವಾದಕ : ಕ್ಷಮಿಸಿ, ನೀವ್ಹೇಳಿದ್ದು ಗೊತ್ತಾಗ್ಲಿಲ್ಲ...?

ವಾಟನಬಿ : 'ಜೀವನ ಬಲು ಕ್ಷಣಿಕ' (ಆತ ಹಾಡತೊಡಗುವನು) 'ಮುದ್ದಿನ ಹೆಣ್ಣೆ ಪ್ರೇಮಿಸು ನೀ'...

ಪಿಯಾನೊ ವಾದಕ : ಓಹ್, ಅದಾ !— ಬಹಳ ಹಳೇ ಹಾಡು, ಅಲ್ವೇನು ? ಆಯ್ತು, ನುಡಿಸ್ತೀನಿ.

ಆತ ಪ್ರಸ್ತಾವನೆಯಾಗಿ ಏನೋ ನಾಲ್ಕು ಮಾತು ಬಡಬಡಿಸುವನು ; ಅನಂತರ ಆತ ತನ್ನ ಗಂಟಲಿಗೆ ಬಿಯರ್ ಸುರಿದುಕೊಳ್ಳುವನು ; ನರ್ತನ ಸಭಾಂಗಣದ ಮೇಲೆ ಜೋಡಿಗಳು ಕಲೆಯುವರು. ಹೊಯ್ದಾಡುತ್ತಿರುವ ಮಣಿಸರದ ಕರ್ಟನ್ ಮೂಲಕ ನರ್ತನ ಸಭಾಂಗಣದ ದೃಶ್ಯ. ಮಣಿಸರದ ಪರದೆ ಅತ್ತ ಇತ್ತ ಹೊಯ್ದಾಡುತ್ತಿರುವಂತೆಯೇ ಜೋಡಿಗಳು ಒಂದೊಂದಾಗಿ ನರ್ತನ ನಿಲ್ಲಿಸಿ ತಿರುಗಿ ನೋಡತೊಡಗುವರು. ಈಗ ನರ್ತಕಿ ವಾಟನಬಿಯ ಕುರ್ಚಿಯಿಂದ ಎದ್ದು ನಿಧಾನಕ್ಕೆ ದೂರ ಹೋಗುತ್ತಿರುವ ದೃಶ್ಯ. ವಾಟನಬಿ ಹಾಡುತ್ತಿರುವಂತೆ ಕ್ಲೋಸ್-ಅಪ್‌ನಲ್ಲಿ ಕ್ಯಾಮರ ಅವನ ಸುತ್ತ ಸುತ್ತುತ್ತಿರುವುದು.

ವಾಟನಬಿ : ಜೀವನ ಬಲು ಕ್ಷಣಿಕ
ಪ್ರೇಮಿಸು ನೀ ಮುದ್ದಿನ ಹೆಣ್ಣೆ
ನಿನ್ನಧರಗಳಲಿ ರಂಗಿರುವಾಗಲೇ
ಮುಂದೇ ನೀ ಪ್ರೇಮಿಸಲು ಸಾಧ್ಯವಾಗದ ಮುನ್ನ
ಏಕೆ ಎನೆ ನಿನ್ನಪಾಲಿಗೆ ಇಲ್ಲ ನಾಳೆ
ಜೀವನ ಬಲು ಕ್ಷಣಿಕ
ಪ್ರೇಮಿಸು ನೀ ಮುದ್ದಿನ ಹೆಣ್ಣೆ
ನಿನ್ನ ರೇಶಿಮೆಯಂಥ ತಲೆಗೂದಲು ಕಪ್ಪಿರುವಾಗಲೇ
ನಿನ್ನ ಹೃದಯದ ಬಡಿತ ನಿಲುವ ಮುನ್ನ
ಏಕೆ ಎನೆ ನಿನ್ನ ಪಾಲಿಗೆ ನಾಳೆ ಇಲ್ಲ.

ವಾಟನಬಿಯ ಮುಖದ ಮೇಲೆ ಕಣ್ಣೀರು ಧಾರಾಕಾರವಾಗಿ ಹರಿಯುತ್ತಿರುವುದು. ಎಲ್ಲೆಡೆ ನೀರವ ಮೌನ. ಇದ್ದಕ್ಕಿದ್ದಂತೆ ಲೇಖಕ ಎದ್ದು ನಿಲ್ಲುವನು.

ಲೇಖಕ : ಹುಮ್ಮಸ್ಸು ಅಂದ್ರೆ ಇದು !

ಆತ ವಾಟನಬಿಯ ಕೈ ಹಿಡಿದು ನರ್ತನಮಂದಿರದಿಂದ ಹೊರಗೆ ಬರುವಂತೆ ಎಳೆಯುತ್ತಿರುವನು.

ಈಗ ಸ್ಟ್ರಿಪ್-ಶೋ ದೃಶ್ಯ. (ಬೆತ್ತಲಾಗುವ ಪ್ರದರ್ಶನ). ದೀಪಾಲಂಕಾರಗೊಂಡ ವೇದಿಕೆಯ ಮೇಲೆ ಹೆಣ್ಣೊಬ್ಬಳು ನರ್ತಿಸುತ್ತಿರುವಳು ; ಮಂದಗತಿಯ ಮಾದಕ ಸಂಗೀತ ; ಕ್ಯಾಮರಾ ಅವಳ ಮೇಲೆಯೇ ತೊನೆದಾಡುತ್ತಿದೆ. ಅವಳು ತೊಟ್ಟ ಉಡುಪೊಂದು ಅವಳ ಕಾಲಮೇಲೆ ಕಳಚಿ ಬಿದ್ದಿರುವ ದೃಶ್ಯ. ಆಕೆ ಹಂತಹಂತವಾಗಿ

ಚಿತ್ರಲಾಗುತ್ತಿರುವುದನ್ನೇ ನೋಡುತ್ತಿರುವ ವಾಟನಬಿ ಮತ್ತು ಲೇಖಕನ ಮೇಲೆ ಈಗ ಕ್ಯಾಮರಾ ಕೇಂದ್ರೀಕೃತವಾಗಿದೆ. ಅವರಿಬ್ಬರೂ ಕುಡಿದು ಮತ್ತರಾಗಿರುವರು.

ಲೇಖಕ : ಇದು ಕಲೆಯೇ ಅಲ್ಲ; ಚಿತ್ರಲೆಯಾಗೋದು ಒಂದು ಕಲೆಯೇ ಅಲ್ಲ. ಇದು ಬಹಳ ನೇರವಾಗೋಯ್ತು. ಕಲೆಗಿಂತಲೂ ತುಂಬಾ ನೇರ. ಆ ಹೆಣ್ಣಿನ ದೇಹದ ಆ ಮೇಲಿನ ಭಾಗ—ಅದೊಂದು ರಸಗುಲ್ಲ, ಅದೊಂದು ಲೋಟ ಜಿನ್, ಕರ್ಪೂರದ ಗುಂಡು, ಅದು ಹಾರ್ಮೋನಿನ ಸಾರ, ಸ್ಟ್ರೆಪ್ಟೋಮೈಸಿನ್ ಯುರೇನಿಯಂ... (ವಾಟನಬಿ ಗುಟುಕಿಸುವನು.)

ಈಗ ಬೀದಿಯ ದೃಶ್ಯ. ಇಬ್ಬರೂ ಸಖತ್ ಕುಡಿದಿದ್ದಾರೆ. ವಾಟನಬಿ ರಸ್ತೆ ದಾಟತೊಡಗುವನು. ಹೆಚ್ಚುಕಮ್ಮಿ ಆತ ಓಡುತ್ತಿರುವನು; ಆದರೆ ಕಾರು ಸರಿಯಾದ ಸಮಯಕ್ಕೆ ಗಕ್ಕನೆ ನಿಲ್ಲುವುದು. ಆತನೂ ಸ್ಟ್ರಿಪ್ ಮಾಡುತ್ತಿರುವನೇನೋ ಎಂಬ ರೀತಿಯಲ್ಲಿ ವಾಟನಬಿ ತನ್ನ ಕೋಟನ್ನು ಕಳಚುವನು. ಆತ ಸಂಚಾರ ನಿಯಂತ್ರಣದಲ್ಲಿ ತೊಡಗುವನು. ಲೇಖಕ ಬಂದು ಅವನನ್ನು ರಸ್ತೆಯಿಂದ ಹೊರಗೆಳೆದುಕೊಂಡು ಹೋಗುವನು.

ಈಗ ದೊಡ್ಡ ನೃತ್ಯಸಭಾಂಗಣದ ದೃಶ್ಯ; ನರ್ತನ ಸ್ಥಳದಲ್ಲಿ ಜನರ ನೂಕುನುಗ್ಗಲು; ಸಿಗರೇಟಿನ ಹೊಗೆ ಧಾರಾಕಾರವಾಗಿ ಮೇಲೇಳುತ್ತಿದೆ. ಬ್ಯಾಂಡಿನವರು ಯಾವುದೋ ಗೀತೆಯೊಂದನ್ನು ನುಡಿಸುತ್ತಿರುವರು. ಈಗ ಬ್ಯಾಂಡಿನ ಬಡಿತದ ವಿಭಾಗದ ದೃಶ್ಯ—ಟ್ರಂಪೆಟ್ ಬಾರಿಸುವವರು, ಟ್ರೋಂಬೋ ಬಾರಿಸುವವರು, ಉಜ್ಜು ವಾದ್ಯದವರು; ಇವರೆಲ್ಲ ನರ್ತಿಸುತ್ತಿರುವ ಗುಂಪಿನ ಎದುರಿಗಿರುವರು.

ಗುಂಪಿನಲ್ಲಿ ವಾಟನಬಿ ಹುಡುಗಿಯೊಬ್ಬಳ ಜೊತೆ ನರ್ತಿಸುತ್ತಿರುವ ದೃಶ್ಯ; ಆಕೆ ಚುಯಿಂಗ್‌ಗಮ್ ಅಗಿಯುತ್ತಿರುವಳು. ಆಕೆ ಜನಜಂಗುಳಿಯಿಂದಾಗಿ ಉತ್ಸಾಹ ಹೀನಳಾಗಿರುವಳು. ಆತ ಸಂಪೂರ್ಣವಾಗಿ ಉದ್ರೇಕದ ಶಿಖರದಲ್ಲಿರುವನು. ಲೇಖಕ ಹೆಚ್ಚುಕಮ್ಮಿ ನರ್ತಿಸುತ್ತಲೇ ನಿದ್ರಿಸುತ್ತಿರುವನು; ಅವನ ಜೊತೆ ನರ್ತಿಸುತ್ತಿರುವ ಹುಡುಗಿ ಅವನನ್ನು ಜಿಗುಟುವಳು. ಆತ ಕಣ್ಣು ತೆರೆದು ಆಕಳಿಸುವನು.

ಈಗ ವೇಗವಾಗಿ ಚಲಿಸುತ್ತಿರುವ ಕಾರಿನ ದೃಶ್ಯ; ಕ್ಯಾಮರಾ ಕೂಡ ಅದರ ಪಕ್ಕದಲ್ಲೇ ಚಲಿಸುತ್ತಿದೆ. ಕಾರಿನೊಳಗೆ ವಾಟನಬಿ, ಲೇಖಕ, ಇಬ್ಬರು ಹುಡುಗಿಯರು ಕುಳಿತಿರುವರು. ಹೊರಗಿನ ವಸ್ತುಗಳ ಪ್ರತಿಬಿಂಬಗಳು ಕಾರಿನ ಬಾಗಿಲು ಗಾಜಿನ ಮೇಲೆ ಬಿದ್ದು, ನಂತರ ವಾಟನಬಿಯ ಮುಖದ ಮೇಲೆ ಬಿದ್ದು ಜಿಗುಳಿ ಹೋಗುತ್ತಿರುವುವು. ಆತ ತುಂಬಾ ಸೋತವನಂತೆ ಕಾಣುತ್ತಿರುವನು. ಇಬ್ಬರು ಹುಡುಗಿಯರಲ್ಲಿ ಒಬ್ಬಳು,

ತುಟಿಗೆ ಲಿಪ್‌ಸ್ಟಿಕ್ ಹಚ್ಚುತ್ತಿರುವಳು ; ಅನಂತರ ಆಕೆ ಜಾಗರೂಕತೆಯಿಂದ ಕೃತಕ ಕಣ್ಣು ರೆಪ್ಪೆಗಳನ್ನು ತೆಗೆಯುವಳು. ಇನ್ನೊಬ್ಬಳು ಹಣದ ಕಂತೆಯೊಂದನ್ನು ಎಣಿಸು ತ್ತಿರುವಳು. ವಾಟನಬಿ ಅವರೆಡೆಗೆ ನೋಡುವನು. ಅನಂತರ ಕಿಟಕಿಯ ಹೊರಗೆ ನೋಡುವನು.

ವಾಟನಬಿ : ಸ್ವಲ್ಪ ಕಾರ್ ನಿಲ್ಸು ;
ಹುಡುಗಿ : ಕಾರ್ ನಿಲ್ಸು ! ಕಾರ್ ನಿಲ್ಸು !

ಕಾರು ನಿಲ್ಲುವುದು. ವಾಟನಬಿ ಬಾಗಿಲು ತೆರೆದು, ಮಸುಕಿನೊಳಗೆ ಓಡುವನು. ಹುಡುಗಿ ಮುಜುಗರಗೊಂಡಿರುವಳು.

ಲೇಖಕ : (ಎಚ್ಚರಗೊಳ್ಳುತ್ತ) ಏನು ವಿಷಯ, ನಾವು ಮನೆ ಹತ್ರ ಬಂದ್ವಾ ?
ಹುಡುಗ : ಇಲ್ಲ, ಆದೇ ನಿನ್ನ ಸ್ನೇಹಿತ, ಬಹುಶಃ ಎಲ್ಲಾ ಕಾರಿಕೊಳ್ಳುತ್ತಿರಬೇಕು.

ಲೇಖಕ ಕಾರಿಳಿದು ಹೋಗುವನು. ವಾಟನಬಿ ಮಸುಕಿನೊಳಗಿಂದ ಬರುತ್ತಿವನು. ದೂರದಲ್ಲಿ ಲೌಡ್‌ಸ್ಪೀಕರ್‌ನಲ್ಲಿ ಹಾಡೊಂದರ ಶಬ್ದ ಕೇಳಿಬರುತ್ತಿರುವುದು. ಜೊತೆಗೆ ಟ್ರೇನ್‌ನ ಶಬ್ದ ಕೂಡ ಕೇಳಿಬರುವುದು. ವಾಟನಬಿ ನಗುವನು ಅಥವಾ ನಗಲು ಪ್ರಯತ್ನಿಸುವನು. ಅವನು ಮತ್ತು ಲೇಖಕ ಪರಸ್ಪರ ಮುಖ ನೋಡಿಕೊಳ್ಳುವರು. ಬಹುಶಃ ವಾಟನಬಿ ಆಸ್ಪತ್ರೆಯಲ್ಲಿ ಕೇಳಿದ "ನೀನು ವಾಂತಿ ಮಾಡಿಕೊಳ್ಳೋದಕ್ಕೆ ಆರಂಭಿಸಿದ ಅಂದ್ರೆ ಈಗ ನೀನು ಬದುಕಿರೋದು ಇನ್ನು ಕೇವಲ ಮೂರು ತಿಂಗಳು ಅಂತಾ ಅರ್ಥ" ಎಂಬ ಈ ಮಾತುಗಳನ್ನು ಜ್ಞಾಪಿಸಿಕೊಳ್ಳುತ್ತಿರಬಹುದು. ಈಗ ಇಬ್ಬರ ಅಮಲೂ ಸಂಪೂರ್ಣವಾಗಿ ಇಳಿದಿದೆ, ಸ್ತಿಮಿತದಲ್ಲಿದ್ದಾರೆ. ಅವರು ಕಾರೊಳಗೆ ಬಂದು ಕುಳಿತುಕೊಳ್ಳುವರು, ಕಾರು ಚಲಿಸುವುದು.

ಹುಡುಗಿ : ನೀವಿಬ್ರೂ ಯಾಕೆ ಗೂಬೆ ಥರ ಇದೀರಿ ? ಗೂಬೇಥರ ಇರೋರನ್ನ ಕಂಡ್ರೆ ನನ್ಗಾಗಲ್ಲ. ಹೂಂ ಬನ್ನಿ, ಏನಾದ್ರೂ ಖುಷಿಯಾಗಿ ಹಾಡೋಣ.

ಇಬ್ಬರೂ ಹುಡುಗಿಯರೂ ಎಷ್ಟು ಜೋರಾಗಿ ಸಾಧ್ಯವೊ ಅಷ್ಟು ಎತ್ತರದ ಧ್ವನಿಯಲ್ಲಿ ಹಾಡತೊಡಗುವರು. ವಾಟನಬಿ ಮತ್ತು ಲೇಖಕ ಸುಮ್ಮನೆ ಮುಂದೆ ದಾರಿಯನ್ನು ದಿಟ್ಟಿಸುತ್ತ ಕುಳಿತುಕೊಳ್ಳುವರು.

ಹುಡುಗಿಯರು : ನಮ್ಮ ಮನೆಗೆ ಬನ್ನಿರಿ, ನಮ್ಮ ಮನೆಗೆ ಬನ್ನಿರಿ, ನಾನು ನಿಮಗೆ ಕೇಳಿದ್ದೆಲ್ಲ ಕೊಡುವೆನು. ನಾನು ನಿಮಗೆ ಕ್ರಿಸ್‌ಮಸ್ ಮರವ ಕೊಡುವೆನು.

ಈಗ ವಾಟನಬಿಯ ಮನೆಯಿರುವ ಬೀದಿಯ ದೃಶ್ಯ: ಬೆಳಗಿನ ಸಮಯ. ಆತ ಮನೆಯ ಕಡೆಗೆ ಬರುತ್ತಿರುವನು. ತಲೆಯಮೇಲೆ ಹೊಸ ಹ್ಯಾಟ್ ಇನ್ನೂ ಹಾಗೇ ಇದೆ, ಹ್ಯಾಟಿನ ಕ್ಲೋಸ್-ಅಪ್; ಅನಂತರ ಕ್ಯಾಮರಾ ಚಲಿಸುತ್ತ ಅವನ ಮುಖದ ಮೇಲೆ ಇಳಿಯುವುದು.

ಟೊಯೊ (ಅದೃಶ್ಯ): ಮಿಸ್ಟರ್ ವಾಟನಬಿ.

ಈಗ ಬೀದಿಯ ದೃಶ್ಯ. ಕಛೇರಿ ಕೆಲಸದಾಕೆ ಟೊಯೊ ಅವನ ಹಿಂದೆಯೇ ಓಡಿ ಬರುತ್ತಿರುವಳು. ಆತ ಹಿಂದಿರುಗುವನು, ಆಕೆ ಬಂದು ಆತನನ್ನು ತಲುಪುವಳು.

ಟೊಯೊ: ನಿಮ್ಮ ಹೊಸ ಹ್ಯಾಟ್ ನನ್ನನ್ನ ಸಂಪೂರ್ಣವಾಗಿ ಮೋಸ ಮಾಡ್ಬಿಡ್ತು. (ಆತ ತನ್ನ ಹೊಸ ಹ್ಯಾಟನ್ನು ತಲೆಯಿಂದ ತೆಗೆಯುವನು) ನಾನೀಗ್ತಾನೆ ನಿಮ್ಮ ಮನೇನ ಹುಡುಕ್ತಿದ್ದೆ. ನೀವು ಕೆಲಸಕ್ಕೆ ಹೋಗ್ತಿದೀರೇನು?

ವಾಟನಬಿ: ಇಲ್ಲ.

ಟೊಯೊ: ನಿಮ್ಹತ್ರ ನಿಮ್ಮ ಮೊಹರು ಇದೆಯಾ?

ವಾಟನಬಿ: ಇಲ್ಲ, ಅದು ಮನೇಲಿದೆ.

ಟೊಯೊ: ನಾನು ಕೆಲಸ ಬಿಡ್ಬೇಕಂತಿದೀನಿ—ಮತ್ತೆ ನನ್ಗೆ ಹೊಸ ಕೆಲಸ ಸಿಕ್ಕಿದೆ, ಹಾಗಾಗಿ ನಾನು ಸ್ವಲ್ಪ ತರಾತುರಿಲಿದೀನಿ.

ವಾಟನಬಿ: ಹಾಗಿದ್ಮೇಲೆ ನನ್ಜೊತೆ ಮನೆಗೇ ಬಾ.

ಅವರಿಬ್ಬರೂ ಬೀದಿಯಲ್ಲಿ ಒಬ್ಬರ ಪಕ್ಕ ಒಬ್ಬರು ನಡೆದು ಬರುತ್ತಿರುವ ದೃಶ್ಯ.

ವಾಟನಬಿ: ಕೆಲಸ ಯಾಕೆ ಬಿಡ್ತಿದೀಯಾ?

ಟೊಯೊ: ನನ್ಗೆ ಈ ಕೆಲಸ ತುಂಬಾ ಬೋರ್ ಅನ್ಸುತ್ತೆ. ಆ ಕಛೇರಿನಲ್ಲಿ ಯಾವತ್ತೂ ಏನೂ ಘಟಿಸೋಲ್ಲ. ನಾನೂ ಇದುವರೆಗೆ ಒಂದೂವರೆ ವರ್ಷ ತಡ್ಕೊಂಡೆ. ನೀವು ಐದು ದಿನಗಳ ಕಾಲ ಕಛೇರಿಯಿಂದ ಹೊರಗಡೆ ಹೋದ ಸಂಗತಿ... (ಆಕೆ ಅವನ ಹ್ಯಾಟ್ ನೋಡುವಳು) ಮತ್ತೆ, ನಿಮ್ಮ ಈ ಹೊಸ ಹ್ಯಾಟ್—ಇವೆರಡೇ ಇಡೀ ಒಂದೂವರೆ ವರ್ಷದಲ್ಲಿ ನಡೆದಿರೋ ಘಟನೆಗಳು.

ಈಗ ವಾಟನಬಿಯ ಮನೆಯ ಮಹಡಿ ಕೋಣೆಯ ದೃಶ್ಯ; ಮಿತ್ಸು ಟೈ ಕಟ್ಟುವ ಪ್ರಯತ್ನದಲ್ಲಿ ತೊಡಗಿರುವನು; ಅವರ ಹೆಂಡತಿ ಅವನ ಪಕ್ಕದಲ್ಲಿ ನಿಂತಿರುವಳು.

ಮಿತ್ಸು: ಏನಾದ್ರೂ ಆಗ್ಲಿ, ನೀನು ಮಾತ್ರ ಅವರಿಗೆ ಏನೂ ಹೇಳ್ಬೇಡ.

ಕಾಜೂಪೆ: ಅವರಿಗೆ ನಾನು ಹೇಳೋಂಥದು ಏನೂ ಇಲ್ಲ.

ಮಿತ್ಸು : ಈಗ ನೀನು ಹೀಗೆ ನಟನೆ ಮಾಡಬೇಡ. ಅಷ್ಟಕ್ಕೂ ಎಲ್ಲ ನಿಂದೇ ತಪ್ಪು ; ನೀನು ಅವರ ಪೆನ್‌ಷನ್ ಹಣದ ಬಗ್ಗೆ ಮಾತು ತೆಗೀದೆ ಹೋಗಿದ್ದಿದ್ರೆ...

ಕಾಜುಹೆ : ಎಲ್ಲ ತಪ್ಪನ್ನೂ ನನ್ಮೇಲೆ ಯಾಕೆ ಹೊರಿಸ್ತೀರಿ ? ಮೊದ್ಲು ಸ್ವಲ್ಪ ಜ್ಞಾಪಿಸ್ಕೊಳ್ಳಿ, ಅವತ್ತು ಹಣದ ವಿಷಯ ಮಾತಾಡೋಕ್ಕೆ ಆರಂಭಿಸ್ದೋರು ನೀವೇ. ಅವರು ಹಣಾನ ತಗೊಂಡ್ಹೋಗೋಕೆ ಸಾಧ್ಯವಿಲ್ಲ ಅಂತ ನೀವೇ ಹೇಳಿದ್ರಿ.

ಮಿತ್ಸು : ಇದೊಳ್ಳೆ ತಮಾಷೆಯಾಗಿದೆ. ಒಂದು ಸಣ್ಣ ಕಾರಣಕ್ಕೆ...ಅವರು ಈ ರೀತಿ ನಡ್ಕೊಬೇಕಾಗಿರ್ಲಿಲ್ಲ. ಅವರು ಯಾವತ್ತೂ ಮನೆಗೆ ರಾತ್ರಿ ಬರ್ದೇ ಇದ್ದವರೇ ಅಲ್ಲ. ಅವರು ಇಡೀ ರಾತ್ರಿನ ಎಂದೂ ಹೊರಗೆ ಕಳೆದವರೆ ಅಲ್ಲ. ಅವರ ಇಡೀ ಜೀವಮಾನದಲ್ಲಿ ಅವರು ಮನೆಬಿಟ್ಟು ಹೊರಗಡೆ ಉಳಿದದ್ದು ನಿನ್ನೇ ರಾತ್ರಿನೇ.

ಕಾಜುಹೆ : ಸರಿ, ಇನ್ನು ಈ ವಿಷಯದಲ್ಲಿ ನಾವು ಹೆಚ್ಚು ಮಾತಾಡೋದು ಬೇಡ—ಏನು ಅಪರಾಧವಾಯ್ತು ಅಂತಾ ನಮ್ಗೇ ಗೊತ್ತಿಲ್ಲ.

ಅದೇ ಸಮಯಕ್ಕೆ ಅವರಿಗೆ ಏನೋ ಸದ್ದು ಕೇಳಿಸುವುದು. ಕಾಜುಹೆ ಮಹಡಿ ಮೆಟ್ಟಿಲ ಕಡೆಗೆ ಓಡಿಹೋಗುವಳು.

ಈಗ ನಡುಮನೆಯ ದೃಶ್ಯ ; ಟೊಯೊ ಮತ್ತು ವಾಟನಬಿ ಕೋಣೆಯೊಳಗೆ ಹೋಗುತ್ತಿರುವರು. ಮನೆಗೆಲಸದಾಕೆ ವಾಟನಬಿಯ ಹ್ಯಾಟನ್ನು ತೆಗೆದುಕೊಂಡು ಅದನ್ನೇ ನೋಡುತ್ತ ನಿಂತಿರುವಳು.

ಈಗ ವಾಟನಬಿಯ ಕೋಣೆಯ ದೃಶ್ಯ. ಟೊಯೊ ಅವನ ಕೋಟನ್ನು ಕಳಚಿ ಅದನ್ನು ಹ್ಯಾಂಗರಿಗೆ ತೂಗುಹಾಕುವಳು. ಆತ ಅವಳನ್ನೇ ಗಮನಿಸುತ್ತಿರುವನು ; ನಂತರ ತನ್ನ ಡೆಸ್ಕ್ ಕಡೆಗೆ ತಿರುಗುವನು. ಆಕೆ ಅವನಿದ್ದೆಡೆಗೆ ಬರುವಳು ; ತನ್ನ ರಾಜಿನಾಮೆ ಪತ್ರವನ್ನು ಅವನ ಡೆಸ್ಕ್ ಮೇಲೆ ಇಡುವಳು. ಆಕೆ ಕೋಣೆಯ ಸುತ್ತಲೂ ತಿರುಗಾಡುತ್ತ ಬರುತ್ತಿರುವಾಗ, ಕಟ್ಟುಹಾಕಿ ಗೋಡೆಯ ಮೇಲೆ ತೂಗುಹಾಕಿರುವ ಅಭಿನಂದನ ಪತ್ರವನ್ನು ನೋಡುವಳು.

ಟೊಯೊ : ಸ್ವಲ್ಪ ನೀವೇ ಯೋಚಿಸಿನೋಡಿ, ಅದೇ ಜಾಗದಲ್ಲಿ ಹೆಚ್ಚು ಕಮ್ಮಿ ಮೂವತ್ತು ವರ್ಷ ! ಇದನ್ನ ನೆನದ್ರೇ ನಂಗೆ ಭಯವಾಗುತ್ತೆ. (ಪಕ್ಕಕ್ಕೆ ತಿರುಗಿ ಅವನನ್ನು ನೋಡುವಳು) ಹೀಗೇಳ್ದೇ ಅಂತ ದಯವಿಟ್ಟು ಬೇಸರ ಮಾಡ್ಕೋಬೇಡಿ.

ವಾಟನಬಿ : ಪರ್‍ವಾಗಿಲ್ಲ ಬಿಡು. ನೋಡು, ನಾನು ಆ ಕಾಲದ ಪತ್ರಗಳನ್ನು ನೋಡ್ತಿರಬೇಕಾದ್ರೆ ಒಂದ್ಸಾರಿ ನೀನು ಕಛೇರಿಲಿ ಒಂದು ಜೋಕ್‌ನ ಜೋರಾಗಿ ಓದಿ ಹೇಳಿದ್ದೆಯಲ್ಲಾ, ಆ ಜೋಕ್ ನನ್ಗೆ ಚನ್ನಾಗಿ ನೆನಪಿದೆ. ಆ ಜೋಕ್ ನಿಜಕ್ಕೂ ಸತ್ಯವಾದದ್ದು. ನಾನು ಆ ಕಛೇರಿಯಲ್ಲಿ ಸುಮಾರು ಮೂವತ್ತು ವರ್ಷಗಳಿಂದ ಇದೀನಿ; ಆದ್ರೆ ನನ್ಗೆ ಒಂದು ದಿನ ಕೂಡ ನೆನಪಿನಲ್ಲಿ ಉಳಿದಿಲ್ಲ. ನಾನು ಮಾಡಿದ ಒಂದು ಕೆಲಸ ಕೂಡ ನೆನಪಿಲ್ಲ. ನಾನು ಸದಾ ಬಿಜಿಯಾಗಿರ್‍ತಿದ್ದುದ್ದು, ನನ್ಗೆ ಸದಾ ಬೇಸರ ಅನ್ನಿಸುತ್ತಿದ್ದುದ್ದು ಮಾತ್ರ ನೆನಪಿದೆ, ಅಷ್ಟೆ. (ಆತ ತಲೆ ತಗ್ಗಿಸುವನು. ಆಕೆ ಅವನ ಕಡೆಗೆ ನೋಡುವಳು. ಅನಂತರ ನಗತೊಡಗುವವಳು; ಕಡೆಗೆ ಅವನೂ ಅವಳ ನಗುವಿನಲ್ಲಿ ಭಾಗಿಯಾಗುವನು.)

ಟೊಯೊ : ನೀವು ಈ ಥರ ಮಾತಾಡ್ತಿರೋದನ್ನ ನಾನು ಕೇಳ್ತಿರೋದು ಇದೇ ಮೊದಲ್ನೇ ಸಲ. ನಿಮ್ಗೆ ಈ ರೀತಿಯ ಭಾವನೆಗಳಿರಬಹುದು ಅಂತಾ ನಾನು ಖಂಡಿತವಾಗಿಯೂ ತಿಳಿದಿರಲಿಲ್ಲ.

ಆಕೆ ನಗುತ್ತಿರುವಳು; ಸಂತೋಷದ ಭರದಲ್ಲಿ ಆಕೆ ಕೈ ಚಾಚಿ ಅವನೆರಡೂ ಕೈಗಳನ್ನು ಹಿಡಿದುಕೊಂಡು ಕೈ ಕುಲುಕುವಳು. ಅವರ ಹಿಂದೆ ಇರುವ ಬಾಗಿಲು ತೆರೆದು ಕೊಳ್ಳುವುದು. ಕೆಲಸದಾಕೆ ಚಹಾದೊಡನೆ ಕಾಣಿಸಿಕೊಳ್ಳುವಳು. ಆ ದೃಶ್ಯವನ್ನು ನೋಡಿ ಸ್ತಂಭೀಭೂತಳಾಗಿ ನಿಲ್ಲುವಳು.

ಈಗ ಮಹಡಿ ಮೇಲಿನ ಕೋಣೆಯ ದೃಶ್ಯ.

ಮಿತ್ಸು : ನೋಡು, ದಡ್ಡಿಯ ಹಾಗೆ ಆಡ್ಬೇಡ. ನಂಗೊತ್ತು, ಚಿಕ್ಕಪ್ಪ ಕೂಡ ಇದೇ ವಿಷಯ ಹೇಳಿದ್ರು. ಆದ್ರೆ ಅಪ್ಪ ಅಷ್ಟು ಚಿಕ್ಕವಯಸ್ಸಿನ ಹುಡುಗೀನ ಪ್ರೀತಿ ಮಾಡ್ತಿದ್ದಾರೆ ಅನ್ನೋದನ್ನ ಊಹಿಸಿಕೊಳ್ಳೋದಿಕ್ಕೂ ನನಗೆ ಸಾಧ್ಯವಾಗಿಲ್ಲ. (ಅವರಿಬ್ಬರೂ ಹಾಸಿಗೆಯ ಮೇಲೆ ಕೂರುವರು)

ಈಗ ವಾಟನಬಿಯ ಕೋಣೆಯ ದೃಶ್ಯ; ಆತ ತನ್ನ ಡೆಸ್ಕ್ ಬಳಿ ಇರುವನು. ಸ್ವಲ್ಪ ದೂರದಲ್ಲಿ ಆ ಹುಡುಗಿ ಮಂಡಿಯೂರಿ ವಿನೀತಳಾಗಿ ಕುಳಿತಿರುವಳು. ಆತ ತನ್ನ ಕನ್ನಡಕದ ಮೂಲಕ ಆಕೆಯನ್ನು ನೋಡುವನು.

ವಾಟನಬಿ : ನೋಡು, ಇದು ಸೂಕ್ತವಾದ ಫಾರಂ ಅಲ್ಲ.

ಆತ ಆಕೆಯನ್ನು ನೋಡುವನು. ಆಕೆ ಇನ್ನೆಲ್ಲೋ ನೋಡುವಳು. ಅಂತೂ ಕೊನೆಗೆ ಆತ ರಾಜೀನಾಮೆ ಪತ್ರದ ಮೇಲೆ ತನ್ನ ಮೊಹರು ಒತ್ತುವನು. ಮೊಹರೊತ್ತಿದ ಪತ್ರವನ್ನು ಆಕೆಯ ಕೈಗೆ ಕೊಡುವನು. ಆಕೆ ಮುಗುಳು ನಗುವಳು.

ವಾಟನಬಿ : ನೀನು ಈದಿನ ಕಛೇರಿಗೆ ಹೋಗ್ತಿದೀಯ ?
ಟೊಯೊ : ಹಾಂ, ಹೌದು. ನಾನು ಈ ಪತ್ರವನ್ನು ಕಛೇರಿಗೆ ತಲುಪಿಸಲೇಬೇಕು.
ವಾಟನಬಿ : ನೀನು ಒಂದ್ನಿಮಿಷ ಕಾಯೋದಾದ್ರೆ ನಾನು ನನ್ನ ರಜೆ ಚೀಟಿ ಬರ್ಕೊಡ್ತೀನಿ. ನನಗೋಸ್ಕರವಾಗಿ ನೀನು ಇದನ್ನ ತಗೊಂಡ್ಹೋಗಿ ಕೊಡ್ತೀಯಾ ?
ಟೊಯೊ : ನಿವ್ಯಾಕೆ ನಿಮ್ಮ ಪಾಡಿಗೆ ಕೆಲಸಕ್ಕೆ ಹೋಗ್ತಿಲ್ಲ. ? ಕಛೇರಿಲಿ ಎಲ್ಲರೂ ಈ ವಿಷಯಾನೇ ಮಾತಾಡ್ಕೊತಿದಾರೆ ; ಇನ್ನೇನು ನಿಮ್ಮ ಕಥೆ ಮುಗಿದ ಹಾಗೇ, ಅಂತಾ ಅವರೆಲ್ಲ ಹೇಳ್ತಿದಾರೆ. ನಿಜವಾಗಿಯೂ ನಿಮಗೆ ಆರೋಗ್ಯ ಸರಿಯಿಲ್ವಾ ? ನೀವು ಬಹಳ ಮಂಕಾಗಿದಿರಿ.
ವಾಟನಬಿ : ಹಾಗೇನಿಲ್ಲ, ನಾನು...
ಟೊಯೊ : ನೀವು ಕೆಲಸ ಮಾಡೋರ ಹಾಗೆ ನಟಿಸಿ ದಿನಾ ಹೊರಗಡೆ ಹೋಗ್ತೀರಲ್ಲ, ಎಲ್ಲಿಗೋಗ್ತೀರಿ ? ಸುಳ್ಳು ಹೇಳ್ಬಾರ್ದು ಮತ್ತೆ ? ನಿಮಗೆ ಗೊತ್ತೇನು, ನಿಮ್ಮನ್ನು ವಿಚಾರಿಸ್ಕೊಂಡೋಗೋಕೆ ನಿನ್ನೆ ಸಕಾಯಿ ಇಲ್ಲಿಗೆ ಬಂದಿದ್ದ. (ಆಕೆ ತಕ್ಷಣ ನಗುವಳು) ಆದ್ರೆ ನೀವೇನೂ ಯೋಚಿಸಬೇಕಾಗಿಲ್ಲ. ಮೂವತ್ತು ವರ್ಷಗಳು ಕಳೆದ ಮೇಲಾದರೂ ನಿಮಗೆ ಒಂದು ರೀತಿ ವಿಶ್ರಾಂತಿ ಖಂಡಿತ ಬೇಕಾಗಿದೆ. ನಾನು ನಿಮ್ಮ ಬಗ್ಗೆ ಆ ಕಾರ್ಪ್ ಥರ, ಮಾತಾಡೋಕೆ ಹೋಗೋದಿಲ್ಲ.
ವಾಟನಬಿ : ಮಿಸ್ಟರ್ ಕಾರ್ಪ್ ?
ಟೊಯೊ : ನಿಮಗೆ ಗೊತ್ತೇನು ? ಅದು ಅವನಿಗೆ ನಾನಿಟ್ಟಿರೋ ಅಡ್ಡ ಹೆಸರು—ಅಂದ್ರೆ ಅವನು ನೋಡೋಕೆ ಹೆಣ ಇದ್ದ ಹಾಗೇ ಇದಾನೆ. ಬರೀ ಬುರುಡೇ ಬಿಡ್ತಾನೆ ; ಅವನ ಮಾತ್ನಲ್ಲಿ ಯಾವು ಹುರುಳೂ ಇರೋದಿಲ್ಲ. ಆಮೇಲೆ, ಯಾವಾಗ್ಲೂ ತಾನು ಎಲ್ಲರಿಗಿಂತಲೂ ಏನೂ ಮಹಾ ಅನ್ನೋ ಹಾಗೆ ಆಡ್ತಾನೆ. ನನ್ಜೊತೆನೂ ಕೂಡ ಹಾಗೇ. ಯಾಕೆ ಗೊತ್ತಾ ? ಅವನು ನನಗಿಂತ ತಿಂಗಳಿಗೆ ಕೇವಲ 200 ಯೂನ್ ಹೆಚ್ಚಿಗೆ ಸಂಪಾದಿಸ್ತಾನೆ, ಅದ್ಕೆ. (ವಾಟನಬಿ ನಗತೊಡಗುವನು, ಆಕೆ ಸ್ವಲ್ಪ ಮುಜುಗರದಿಂದ ಎದ್ದು ನಿಲ್ಲುವಳು). ಸರಿ, ನಾನಿನ್ನು ಹೊರಡ್ತೀನಿ (ಆಕೆ ಪತ್ರಗಳನ್ನೂ ತನ್ನ ಕೋಟನ್ನೂ ತೆಗೆದುಕೊಳ್ಳುವಳು. ಆತ ಆಕೆಯ ಕಡೆ ನೋಡುವನು)

ಈಗ ಕ್ಯಾಮರಾ ಟೊಯೊ ಮೇಲಿದೆ. ಅವಳು ಹಾಕಿರುವ ಕಾಲುಚೀಲದಲ್ಲಿ (ಮಂಡಿಯ ವರೆಗೆ ಬರುವಂತ ಕಾಲುಚೀಲ) ಎರಡು ತೂತುಗಳು ಬಿದ್ದಿವೆ.
ವಾಟನಬಿ : ಇರು, ನಾನೂ ನಿನ್ನ ಜೊತೆ ಬರ್ತೇನೆ.

ಈಗ ಹೊರಗಿನಿಂದ ಮಹಡಿಯ ಕಿಟಕಿಗಳು ಕಾಣುವ ದೃಶ್ಯ; ಮಿತ್ಸು ಮತ್ತು ಅವನ ಹೆಂಡತಿ ಆ ಕಿಟಕಿಯಿಂದ ಹೊರಗೆ ನೋಡುತ್ತಿರುವರು.

ಈಗ ಮನೆಯ ಮುಂದಿನ ಗೇಟಿನ ದೃಶ್ಯ ; ವಾಟನಬಿ ಮತ್ತು ಟೊಯೊ ಇಬ್ಬರೂ ನಗುತ್ತ ಗೇಟಿನಿಂದ ಹೊರಗೆ ಬರುತ್ತಿರುವರು.

ಈಗ ಮಹಡಿ ಕಿಟಕಿಯ ಮೂಲಕ ದಂಪತಿಗಳಿಬ್ಬರೂ ವಾಟನಬಿ ಮತ್ತು ಟೊಯೊವನ್ನು ಗಮನಿಸುತ್ತಿರುವರು. ಈಗ ಕೆಳಗೆ ಇವರಿಬ್ಬರಿರುವ ದೃಶ್ಯ. ಆಕೆ ವಾಟನಬಿಯನ್ನು ನಿಲ್ಲಿಸಿ, ಅವನ ಟೈ ಸರಿಪಡಿಸುವಳು.

ಈಗ ಮಹಡಿ ಮೇಲೆ ಮಿತ್ಸು ಮತ್ತು ಅವನ ಹೆಂಡತಿ ನಿಂತಿರುವ ದೃಶ್ಯ ; ಆಕೆ ವ್ಯಂಗ್ಯವಾಗಿ ನಗುವಳು, ಆತ ನೋವಿನಿಂದ ತಲೆ ತಗ್ಗಿಸುವನು.

ಈಗ ಮಹಡಿಮೆಟ್ಟಿಲ ದೃಶ್ಯ; ವಾಟನಬಿ ಮತ್ತು ಟೊಯೊ ಹೋಗುತ್ತಿರುವ ಸುದ್ದಿಯನ್ನು ತಿಳಿಸಲು ಕೆಲಸದಾಕೆ ಮಹಡಿ ಹತ್ತಿ ಹೋಗುತ್ತಿರುವಳು.

ಈಗ ಬೀದಿಯ ದೃಶ್ಯ ; ವಾಟನಬಿ ಮತ್ತು ಟೊಯೊ ನಡೆಯುತ್ತಿದ್ದಾರೆ. ಅವರು ನಡೆಯುತ್ತಿರುವಂತೆಯೇ ಹಿನ್ನೆಲೆಯಲ್ಲಿ ಮಧುರವಾದ ಸಂಗೀತ ಕೇಳಿಸುತ್ತದೆ.

ಟೊಯೊ : ಅಂಥ ಸುಂದರವಾದ ಮನೆಯಲ್ಲಿ ವಾಸ ಮಾಡ್ತೀರೋ ನೀವು ನಿಜಕ್ಕೂ ಅದೃಷ್ಟವಂತರು. ಯಾಕೆ ಗೊತ್ತಾ ? ನಾನಿರೋ ಕಡೆ ಎರಡು ಕೋಣೆಯಲ್ಲಿ ಮೂರು ಕುಟುಂಬಗಳು ವಾಸವಾಗಿದೀವಿ. ನಿಮಗೊಬ್ಬ ಮಗ ಇದ್ದಾನಲ್ವೇನು ?

ವಾಟನಬಿ : ಹೆಂಗಸರು ಹಾಕಿಕೊಳ್ಳೋ ಕಾಲ್ಚೀಲಾನ ನಾನು ಎಲ್ಲಿ ಕೊಂಡ್ಕೊಬಹುದು ?

ಟೊಯೊ : ನೀವು ಕಾಲ್ಚೀಲ ಕೊಂಡ್ಕೊಬೇಕೇನು ? ಅವನ್ನ ಇಲ್ಲೆಲ್ಲೋ ಮಾರ್‍ತಾರೆ ಅಂತಾ ಕಾಣುತ್ತೆ. ಕಾಲ್ಚೀಲಗಳು ನಿಮ್ಮ ಸೊಸೆಗೆ, ಹೌದು ತಾನೆ ? ನಿಮ್ಮ ಸೊಸೆ ತುಂಬ ಚನ್ನಾಗಿದಾಳೆ ಅಂತಾ ಕೇಳಿದೀನಿ.

ಈಗ ಅಂಗಡಿಯ ದೃಶ್ಯ; ಅವರು ಇದೀಗ ತಾನೇ ಅಂಗಡಿಯಿಂದ ಹೊರ ಬರುತ್ತಿದ್ದಾರೆ. ಪ್ಯಾಕ್ ಮಾಡಿರುವ ಒಂದು ಜೊತೆ ಹೊಸ ಕಾಲ್ಚೀಲವನ್ನು ಆಕೆ ಹಿಡಿದುಕೊಂಡಿರುವಳು, ನಗುತ್ತಿರುವಳು.

ಟೊಯೊ : ನನ್ಗೆ ತುಂಬ ಖುಷಿಯಾಗಿದೆ. ಯಾಕೆ ಗೊತ್ತಾ ? ಈ ಒಂದು ಜೊತೆ ಕಾಲ್ಚೀಲ ತಗೋಳೋಕೆ ನಾನು ಮೂರು ತಿಂಗಳು ತಿಂಡಿ ತಿನ್ನೋದು

ಬಿಟ್ಟು ಉಪವಾಸ ಮಾಡ್ಬೇಕಾಗಿತ್ತು; ಆದರೆ ಯಾಕಾಗಿ ನೀವು ಇದನ್ನ ನನ್ಗೆ ಕೊಡಿಸಿದ್ರಿ ?

ವಾಟನಬಿ : ನಿನ್ನ ಹಳೇ ಕಾಲ್ಚೀಲಗಳಲ್ಲಿ ತೂತು ಬಿದ್ದಿತ್ತು, ಅದಕ್ಕೆ.

ಟೊಯೊ : ನನ್ನ ಕಾಲ್ಚೀಲ ತೂತು ಬಿದ್ದಿದ್ರೆ ಅದ್ರಿಂದ ನಿಮ್ಗೇನೂ ಅವಮಾನ ಆಗ್ತಿರ್ಲಿಲ್ವಲ್ಲಾ ?

ವಾಟನಬಿ : ನಾನು ಹೀಗೆ ಸುಮ್ನೆ...

ಟೊಯೊ : ನಾನು ನಿಮ್ಮನ್ನ ಬೈಯ್ತಿಲ್ಲ. (ಆಕೆ ಪಕ್ಕಕ್ಕೆ ತಿರುಗಿ ನಗುವಳು) ನೀವು ಹೀಗೆ ಮಾಡಿದ್ದು ನನ್ಗೆ ತುಂಬಾ ಮೆಚ್ಚುಗೆಯಾಯ್ತು. ನಾನು ಯಾತಕ್ಕೆ ಹೀಗೆ ಹೇಳ್ದೆ ಅಂದ್ರೆ ನನಗೊಂದು ರೀತಿ ಸಂಕೋಚವಾಯ್ತು, ಅದಕ್ಕೆ.

ಕೂಡಲೇ ಅವಳಿಗೆ ಸಂಕೋಚವುಂಟಾಗುವುದು; ಆಕೆ ಅವನ ಬೆನ್ನ ಹಿಂದೆ ಬಂದು ನಡೆಯತೊಡಗುವಳು. ಅನಂತರ ನಗುತ್ತ ಅವನ ಬೆನ್ನು ಹಿಡಿದು ಮುಂದೆ ತಳ್ಳುವಳು.

ಈಗ ಚಹಾಪಾನ ಗೃಹದ ದೃಶ್ಯ; ಆತ ಆಕೆಯ ಕಡೆಗೆ ನೋಡಿ, ತನ್ನ ಕೇಕ್ ತುಂಡನ್ನು ಅವಳೆಡೆಗೆ ತಳ್ಳುವನು. ಆಕೆ ನಗುವಳು, ತನ್ನಪಾಡಿಗೆ ತಾನು ಚಹಾಕ್ಕೆ ಸಕ್ಕರೆಚೂರುಗಳನ್ನು ಒಂದೊಂದಾಗಿ ಹಾಕಿಕೊಳ್ಳತೊಡಗುವಳು.

ಟೊಯೊ : ನಾನು ನಿಮಗೊಂದ್ ತಮಾಷೆ ವಿಷಯ ತಿಳಿಸಲೇನು ? ಮತ್ತೆ, ನಾನು ನಮ್ಮ ಕಛೇರಿಲಿರೋ ಎಲ್ಲರಿಗೂ ಒಂದೊಂದು ಅಡ್ಡ ಹೆಸ್ರು ಇಟ್ಟಿದೀನಿ. ನಾನು ತಮಾಷೆಗೆ ಹಾಗೆ ಮಾಡ್ದೆ, ಅದ್ರಿಂದ ನನ್ನ ಬೇಸರ ಸ್ವಲ್ಪ ಕಡಿಮೆ ಯಾಯ್ತು. ನಿಮಗೆ ಕೇಳ್ಬೇಕನ್ಸುತ್ತೇನು ?

ವಾಟನಬಿ : ಹೌದು.

ಟೊಯೊ : ಆಗ್಩ಿ, ಹೇಳ್ತೀನಿ. ಮೊದಲನೇದು—ಶ್ರೀಮಾನ್ ಬಸವನಹುಳು, ಈಗ ಹೇಳಿ, ಯಾರು ಗೊತ್ತ ? ಸದಾ ವಿಲವಿಲ ಒದ್ದಾಡುವ, ನಿಯಂತ್ರಿಸಲು ಸಾಧ್ಯವಾಗದ ವ್ಯಕ್ತಿ (ಅವನಿಗೆ ಗೊತ್ತಿಲ್ಲ, ಆಕೆ ಕಿಲಕಿಲ ನಗುವಳು) ಅದೇ ಶ್ರೀಮಾನ್ ಓನೊ.

ವಾಟನಬಿ ನಕ್ಕು ತಲೆದೂಗುವನು.

ವಾಟನಬಿ : ಹಂ! ಹೌದೌದು.

ಟೊಯೊ : ಮುಂದಿನ ಹೆಸರು—ಶ್ರೀಮಾನ್ ಅಳುಮುಂಜಿ. ಈಗ ಯೋಚಿಸಿ, ಯಾರು ಅಂತ. ಯಾರು ಸದಾ ಅಳುಮೋರೆ ಮಾಡ್ಕೊಂಡಿರ್ತಾರೋ ಅವ್ರು.

ವಾಟನಬಿ : ಶ್ರೀಮಾನ್ ಒಹಾರ ?

ಟೊಯೊ : ಸರಿಯಾಗಿ ಹೇಳಿದ್ರಿ. ಮತ್ತೆ ಈಗ—ಶ್ರೀಮಾನ್ ಅಂಟುನೊಣ. ಆತ ಬಹಳ ಜಿಗುಟು ಮನುಷ್ಯ. ಹೂಂ ಯಾರು ಹೇಳಿ ನೋಡೋಣ! ನಿಮ್ಗೆ ಗೊತ್ತು, ಗೊತ್ತಿಲ್ವೇನು ? ಶ್ರೀಮಾನ್ ನೊಗುಚಿ ! ನಾನು ಸಯಿಟೊಗೆ ಏನ್ ಹೆಸರಿಟ್ಟಿದೀನಿ ಅಂತಾ ನೀವು ತಿಳ್ಕೊಬೇಕೇನು ? ಅವನಲ್ಲಿ ಅಂಥ ವಿಶೇಷವಾದ ಗುಣ ಏನೂ ಇಲ್ಲ. ಅವನು ಯಾವಾಗಲೂ ಒಂದೇ ಥರ ಇರ್ತಾನೆ.

ವಾಟನಬಿ : ಸಯಿಟೊ ? ನನಗ್ಗೊತ್ತಿಲ್ಲ.

ಟೊಯೊ : ಮಿಸ್ಟರ್ ತಿಂಡಿ ಪಟ್ಟಿ.

ವಾಟನಬಿ : ತಿಂಡಿಪಟ್ಟಿ ?

ಟೊಯೊ : ಹೌದು, ನಿಮಗೆ ಗೊತ್ತೇನು ? ಅವನಿಗೆ ಯಾವಾಗ್ಲೂ ಅಗ್ಗದ ಹೋಟಲೆಂದ್ರೆ ಪ್ರಾಣ. ಅಲ್ಲಿ ತಿಂಡಿ ಯಾವಾಗ್ಲೂ ಒಂದೇ ಥರ ಇರುತ್ತೆ, ರುಚಿಯೂ ಇಲ್ಲ, ಚನ್ನಾಗೂ ಇರೊಲ್ಲ. (ಅವರಿಬ್ಬರೂ ನಗುವರು)

ವಾಟನಬಿ : ಕಿಮುರನ ವಿಷಯ ಏನು ?

ಟೊಯೊ : ನಾನು ಅವನ್ನ ಶ್ರೀಮಾನ್ ನರಪೇತ್ಲ ಅಂತ ಕರೀತೀನಿ. ಯಾಕೆ ಅಂದ್ರೆ ಅವನು ಅಂಚೀಕಡ್ಡಿ ಥರ ಒಣಕ್ಕಂಡಿದಾನೆ, ಅದ್ಕೆ. ನಾನು ನಿಮ್ಗೂ ಅಡ್ಡಹೆಸ್ರು ಇಟ್ಟಿದೀನಿ, ಆದರೆ ನಾನು ಅದನ್ನ ಹೇಳೊಲ್ಲ. ಯಾಕೇಳೊಲ್ಲ ಅಂದ್ರೆ, ಆ ಹೆಸ್ರು ಕೇಳೋಕೆ ಅಷ್ಟು ಹಿತವಾಗಿಲ್ಲ.

ವಾಟನಬಿ : ದಯವಿಟ್ಟು ಹೇಳು. ನಾನು ತಪ್ಪು ತಿಳಿಯೋಲ್ಲ. ನೀನು ಹೆಸರಿಟ್ಟಿದೀಯಾ ಅಂದ್ಮೇಲೆ ನಾನು ಒಪ್ಪಿಕೊಂಡೇ ಒಪ್ಪಿಕೋತೀನಿ.

ಟೊಯೊ : ಸರಿ, ಹಾಗಾದ್ರೆ ಹೇಳ್ತಿನಿ. ಮತ್ತೆ...ಹೆಸರು ಏನೂ ಅಂದ್ರೆ ಶ್ರೀಮಾನ್ ಮಮ್ಮಿ ಅರ್ಥಾತ್ ಶವ. (ಆಕೆ ನಗತೊಡಗುವಳು, ಅನಂತರ ತಕ್ಷಣ ನಗುವುದನ್ನು ನಿಲ್ಲಿಸುವಳು) ದಯವಿಟ್ಟು ಕ್ಷಮಿಸಿಬಿಡಿ.

ವಾಟನಬಿ : ಪರವಾಗಿಲ್ಲ ಬಿಡು. (ಆಕೆ ಪುನಃ ನಗತೊಡಗುವಳು, ಅನಂತರ ಅವನೂ ಅವಳ ಜೊತೆ ನಗಲಾರಂಭಿಸುವನು)

ಈಗ ಚಹಾದಂಗಡಿಯ ಹೊರಗಿನ ದೃಶ್ಯ.

ಟೊಯೊ : ಇಷ್ಟೆಲ್ಲ ಆತಿಥ್ಯಕಾಗಿ ಧನ್ಯವಾದಗಳು.

ವಾಟನಬಿ : ನೀನು ಇವತ್ತೇ ರಾಜಿನಾಮೆ ಕೊಡ್ಬೇಕೇನು ? ನಾಳೇವರೆಗೂ ಅದನ್ನ ಮುಂದೂಡೋಕಾಗೋಲ್ವಾ? ನಿನ್ಗೆ ಈದಿನ ಸಂಜೆ ನಂಜೊತೆ ಇರೋಕಾಗುತ್ತ?

ಈಗ ಪಿನ್‌ಬಾಲ್ ಪಾರ್ಲರ್ ದೃಶ್ಯ. ಆತ ಆಕೆಗೆ ಪಿನ್‌ಬಾಲ್ ಆಟ ಆಡುವುದನ್ನು ಹೇಳಿಕೊಡುತ್ತಿರುವನು. ಆಕೆ ಸಂತೋಷದಲ್ಲಿರುವಳು. ಈಗ ಸ್ಕೇಟಿಂಗ್ ಆಟವಾಡುವ ನುಣುಪು ನೆಲಗಟ್ಟಿನ ದೃಶ್ಯ. ಆಕೆ ಅವನಿಗೆ ಹೇಗೆ ಜಾರಬೇಕೆಂಬುದನ್ನು ಹೇಳಿಕೊಡುತ್ತಿರುವಳು—ಅವರಿಬ್ಬರೂ ಕೆಳಗೆ ಬೀಳುವರು. ಈಗ ಫನ್‌ಫೇರ್‌ನ ದೃಶ್ಯ; ಅವರಿಬ್ಬರೂ ನಗುತ್ತ ನೂಡಲ್ಸ್ ತಿನ್ನುತ್ತಿರುವರು, ಈಗ ಐಸ್‌ಕ್ರೀಮ್ ಅಂಗಡಿಯ ದೃಶ್ಯ; ಆಕೆ ಐಸ್‌ಕ್ರೀಮ್ ತಿನ್ನುತ್ತಿರುವಳು. ಆತ ನಗುತ್ತ ತನ್ನ ಪಾಲಿನ ಐಸ್‌ಕ್ರೀಮನ್ನು ಆಕೆಗೆ ಕೊಡುತ್ತಿರುವನು. ಈಗ ಅವರಿಬ್ಬರೂ ಚಿತ್ರಮಂದಿರ ದಲ್ಲಿರುವ ದೃಶ್ಯ. ಪರದೆಯ ಮೇಲೆ ಯಾವುದೋ ಕಾರ್ಟೂನ್ ತೋರಿಸಲಾಗು ತ್ತಿರಬೇಕು. ಏಕೆಂದರೆ ಆಕೆ ನಗುತ್ತಿರುವಳು; ಸಂತೋಷದ ಭರದಲ್ಲಿ ಮುಂದಕ್ಕೆ ಬಾಗಿರುವಳು. ಆತ ಆಕೆಯ ಪಕ್ಕದಲ್ಲಿ ಕುಳಿತು ನಿದ್ದೆ ಹೋಗಿರುವನು. ಈಗ ಜಪಾನಿ ಮಾದರಿಯ ರೆಸ್ಟಾರೆಂಟ್ ಒಂದರ ದೃಶ್ಯ; ಅವರಿಬ್ಬರೂ ರಾತ್ರಿಯ ಭೋಜನ ಮಾಡುತ್ತಿರುವರು.

ಟೊಯೊ : ಯಾಕೆ ನೀವು ಏನೂ ತಿಂತಾನೇ ಇಲ್ಲ—ಬಹಳ ಸೋತವರ ಹಾಗೇ ಕಾಣ್ತಿದೀರಿ.

ವಾಟನಬಿ : ಇಲ್ಲ, ಈ ದಿನ ನಾನು ನಿಜಕ್ಕೂ ಖುಷಿಪಟ್ಟಿದೀನಿ.

ಟೊಯೊ : ಆದ್ರೆ ನೀವು ಟಾಕೀಸ್‌ನಲ್ಲಿ ಮಲಗಿಬಿಟ್ಟಿದ್ರಿ, ಚಿತ್ರದ ರಸವತ್ತಾದ ಭಾಗ ಬಂದಾಗ ನೀವು ಗೊರಕೆ ಹೊಡೀತಿದ್ರಿ.

ವಾಟನಬಿ : ಅಂದ್ಹಾಗೆ, ನಿನ್ನೆ ರಾತ್ರಿ .. (ಆತ ಕ್ಷಣಕಾಲ ಮಾತು ನಿಲ್ಲಿಸುವನು) ಆಕೆ ನಗುವಳು) ಇದನ್ನ ನಾನು ಯಾರ್ಗೂ ಹೇಳೋಕಾಗೊಲ್ಲ; ಹೀಗೇಂತ ಹೇಳ್ಕೊಳ್ಳೋಕೆ ನನ್ಗೆ ನಾಚ್ಕೆಯಾಗುತ್ತೆ. ಕಳೆದ ಮೂವತ್ತು ವರ್ಷಗಳಿಂದ ಯಾಕೆ ನಾನು ಶವದ ಥರ ಇರಬೇಕಾಯ್ತು ಅಂದ್ರೆ... (ಆಕೆ ನಿಧಾನವಾಗಿ ಒಂದು ಲೋಟ ನೀರು ಕುಡಿಯುತ್ತಿರುವಳು) ಓಹ್! ನನ್ನನ್ನ ನೀನು ತಪ್ಪಾಗಿ ಭಾವಿಸ್ಬೇಡ, ನೀನು ನನ್ನನ್ನ ಶವ ಅಂಥ ಕರ್ದದ್ದಕ್ಕೆ ನನ್ಗೆ ಖಂಡಿತ ಬೇಸರವಿಲ್ಲ. ನೀನೇಳಿದ್ದು ನಿಜ; ಆದ್ರೆ ಏನ್ ಮಾಡೋದು, ವಿಧಿಯಿಲ್ಲ. ನಾನೀರುವ ಸ್ಥಿತಿಯು ಹಾಗೇ; ನಾನು ಶವದ ಹಾಗೆ ಇರೋಕೆ ಕಾರಣವಾದ ಸಂಗತಿ ಅಂದ್ರೆ...ನನ್ನ ಮಗನಿಗೋಸ್ಕರವಾಗಿ ನಾನು ಹಾಗಿರ್ಬೇಕಾಯ್ತು. ಆದ್ರೆ ಈಗ ನನ್ನನ್ನ ಅವನು ಇಷ್ಟಪಡೋದಿಲ್ಲ. ಅವನು...

ಟೊಯೊ : ಅದ್ಸರಿ, ನೀವು ಹೀಗೆ ಇರೋದಿಕ್ಕೆ ನಿಮ್ಮ ಮಗನ್ನ ದೂಷಣೆ ಮಾಡೋ ಹಾಗಿಲ್ಲ...(ಆಕೆ ತನ್ನ ಹೊಸ ಕಾಲುಚೀಲಗಳನ್ನು ಒಮ್ಮೆ ನೀವಿಕೊಳ್ಳುವಳು) ಅವರೇನು ನಿಮ್ಮನ್ನ ಶವದ ಹಾಗಿರೀ ಅಂತ ಕೇಳ್ಕೊಳ್ಳಲಿಲ್ಲವಲ್ಲ. ಎಲ್ಲಾ

ತಂದೆತಾಯಿಗಳೂ ಒಂದೇ ಥರ–ನಮ್ಮ ತಾಯೀನೂ ನಿಮ್ಮ ಥರಾನೇ ಹೇಳ್ತಾರೆ, ನಿನಗಾಗಿ ನಾನು ಎಷ್ಟೊಂದು ಕಷ್ಟಪಟ್ಟೇ, ಅಂತ. ಯೋಚ್ನೆ ಮಾಡಿದ್ರೆ ಅನ್ನಸ್ತೆ, ಅವಳ ಮಗಳಾಗಿ ಹುಟ್ಟಿದ್ದಕ್ಕೆ ನಾನು ನಿಜಕ್ಕೂ ಹೆಮ್ಮೆಪಡ್ತೀನಿ. ಆದರೆ ಅವಳ ಸಂಕಷ್ಟಗಳಿಗೆ ನಾನು ಕಾರಣ ಅಲ್ಲ (ಆಕೆ ಒಂದು ಕ್ಷಣ ತಡೆಯುವಳು) ನಿಮ್ಮ ಮಗನ ಬಗ್ಗೆ ಹೀಗೆ ನನ್ನ ಜೊತೆ ಯಾಕೆ ಹೇಳ್ತಿದೀರಿ ?

ವಾಟನಬಿ : ಏನಿಲ್ಲ. ಹೀಗೆ ಸುಮ್ನೆ...

ಫಕ್ಕನೆ ನಗುತ್ತಿರುವ ಟೊಯೊಳ ಕ್ಲೋಸ್--ಅಪ್.

ಟೊಯೊ : ನಂಗೊತ್ತು, ನೀವು ಅವರನ್ನ ಬಹಳ ಪ್ರೀತಿಸ್ತೀರಿ.

ನಗುತ್ತಿರುವ ವಾಟನಬಿಯ ಕ್ಲೋಸ್–ಅಪ್.

ಈಗ ರಾತ್ರಿಯಲ್ಲಿ ಬೀದಿಯ ದೃಶ್ಯ. ವಾಟನಬಿ ಒಂಟಿಯಾಗಿ ಮನೆಗೆ ವಾಪಸಾಗುತ್ತಿದ್ದಾನೆ. ಚಿತ್ರದ ಆರಂಭದಲ್ಲಿದ್ದ ಕರುಣಾಜನಕ ಸಂಗೀತ, ಈಗ ತೀವ್ರವಾಗಿ ಕೇಳಿಬರುತ್ತಿದೆ.

ಈಗ ಮನೆಯ ಒಳಭಾಗದ ದೃಶ್ಯ; ಟೇಬಲ್‌ನ ಒಂದು ತುದಿಯಲ್ಲಿ ವಾಟನಬಿ ತಲೆ ತಗ್ಗಿಸಿ ಕುಳಿತುಕೊಂಡಿರುವನು. ಇನ್ನೊಂದು ತುದಿಯಲ್ಲಿ ಅವನ ಮಗ ದಿನಪತ್ರಿಕೆಯನ್ನು ಓದುತ್ತ ಕುಳಿತುಕೊಂಡಿರುವನು, ಅವನ ಹೆಂಡತಿ ಪಕ್ಕದಲ್ಲಿ ಕುಳಿತು ಏನನ್ನೋ ಹೆಣೆಯುತ್ತಿರುವಳು.

ಮಿತ್ಸು : ವಿದ್ಯುತ್ ಖೋತಾ ಇನ್ನು ಕೆಲವೇ ದಿನ ಇರುತ್ತೆ ಅಂತಾ ಪೇಪರ್‌ನಲ್ಲಿ ಬಂದಿದೆ.

ವಾಟನಬಿ : ಹಾಗೇನು ?

ತಲೆಬಾಗಿ ಕುಳಿತಿರುವ, ಆದರೂ ಏನನ್ನೋ ಹೇಳ ಬಯಸುವವನಂತೆ ಕಾಣುತ್ತಿರುವ ವಾಟನಬಿಯ ಕ್ಲೋಸ್–ಅಪ್.

ವಾಟನಬಿಯ ಮಗ ಹಿಡಿದಿರುವ ವಾರಪತ್ರಿಕೆಯ ಕ್ಲೋಸ್–ಅಪ್. ಹೆಣಿಗೆಯಲ್ಲಿ ಮಗ್ನಳಾಗಿರುವ ಅವನ ಹೆಂಡತಿಯ ಕ್ಲೋಸ್–ಅಪ್. ತಲೆ ಎತ್ತುತ್ತಿರುವ ವಾಟನಬಿಯ ಕ್ಲೋಸ್–ಅಪ್.

ಮಿತ್ಸು : (ಅದೃಶ್ಯ) ಕಳೆದ ಮೂವತ್ತು ವರ್ಷಗಳಲ್ಲಿ ಈ ಬಾರಿಯ ಚಳಿಗಾಲವೇ ತುಂಬ ಹಿತವಾದ ಚಳಿಗಾಲ ಅಂತಾ ಪೇಪರ್‌ನಲ್ಲಿದೆ.

ಆತ ಹೇಳಿದ ಮಾತುಗಳು ವಾಟನಬಿಗೆ ಕೇಳಿಸುವುದಿಲ್ಲ, ಅನಂತರ ತನಗೆ ಏನೋ ಹೇಳಿರಬೇಕೆಂದು ಅರಿತುಕೊಂಡು ತಕ್ಷಣ ತಲೆ ಎತ್ತುವನು.

ವಾಟನಬಿ : ಹಾಗೇನು ?

ಈಗ ಆ ಮೂವರನ್ನೂ ಒಳಗೊಂಡ ದೃಶ್ಯ. ವಾಟನಬಿ ಮುಂದಕ್ಕೆ ಬಾಗುವನು. ಆತ ಕಾಫಿಯ ಬಟ್ಟಲನ್ನು ಟೇಬಲ್ ಮೇಲಿಡುತ್ತಿರುವಂತೆಯೇ ಅವನ ಕೈ ನಡುಗುತ್ತಿರುವುದು.

ವಾಟನಬಿ : ನೀನೇನು ತಿಳ್ಕೊಳಲ್ಲ ಅಂದ್ರೆ ನಾನು ನಿನ್ನೊಜತೆ ಸ್ವಲ್ಪ ಹೊತ್ತು ಮಾತಾಡೋಕೆ ಇಷ್ಟಪಡ್ತೀನಿ. ನಿನ್ಗೆ ಮೊದ್ಲೇ ನಾನು ತಿಳಿಸ್ಬೇಕೂ ಅನ್ಕೊಂಡಿದ್ದೆ, ಆದ್ರೆ ಅದೇನು ಅಷ್ಟೊಂದು ಹಿತವಾದ ಕಥೆಯೇನೂ ಅಲ್ಲ, ಮತ್ತೆ...

ಮಿತ್ಸು : ನನ್ಗದನ್ನ ಕೇಳೋಕಿಷ್ಟವಿಲ್ಲ...(ಆತ ದಿನಪತ್ರಿಕೆಯನ್ನು ಧಿಡೀರನೆ ಟೇಬಲ್ ಮೇಲೆ ಬಿಸಾಡುವನು) ನಾನು ಈದಿನ ಚಿಕ್ಕಪ್ಪನ ಹತ್ರ ಎಲ್ಲ ಸಮಸ್ಯೆ ಬಗ್ಗೇನೂ ಮಾತಾಡಿದೀನಿ. ಮತ್ತೆ ಈ ವಿಷಯಾನ ವ್ಯಾವಹಾರಿಕ ರೀತಿಯಲ್ಲಿ ತೀರ್ಮಾನ ಮಾಡ್ಬಿಡ್ಬೇಕೂ ಅಂತ ಕೂಡ ನಾವಿಬ್ರೂ ಯೋಚಿಸ್ಕೊಂಡಿದೀವಿ. ಉದಾಹರಣೆಗೆ ಹೇಳ್ಬೇಕೂ ಅಂದ್ರೆ, ನಿಮ್ಮ ಆಸ್ತಿ ಬಗೆಗಿನ ನನ್ನ ಹಕ್ಕನ್ನ ಚುಕ್ತ ಮಾಡಿಡ್ಬೇಕು.

ವಾಟನಬಿ : ಮಿತ್ಸು !

ಕಾಜುಹೆ ಎದ್ದು ಕೋಣೆಯನ್ನು ಬಿಟ್ಟು ಹೊರಗೆ ಹೋಗುವಳು. ಮಿತ್ಸು ಮುಂದಕ್ಕೆ ಬಾಗುವನು.

ಮಿತ್ಸು : ನೀವೀಗಾಗ್ಲೆ ಐವತ್ತು ಸಾವ್ರ ಯಾನ್ ಅವಳಿಗೋಸ್ಕರ ಖರ್ಚು ಮಾಡಿದೀರಿ —ಈ ವಯಸ್ನಲ್ಲಿ ನಿಮ್ಗೆ ಹುಡ್ಗೀರ್ಹುಚ್ಚು !

ವಾಟನಬಿ : ಮಿತ್ಸು ! ನೀನು ಏನ್ ಮಾತೂಂತಿ...

ಮಿತ್ಸು : ಅಪ್ಪ ! ನಾವು ನಿಮ್ ವ್ಯವಹಾರಗಳಲ್ಲಿ ತಲೆಹಾಕೊಲ್ಲ. ಪ್ರತೀರಾತ್ರಿ ನೀವು ಹೊರಗೆ ಹೋಗೋದನ್ನ ನೋಡಿಯೂ ನಾವು ಕಣ್ಮುಚ್ಕೊಂಡಿದೀವಿ. ನೀವೇನ್ಮಾಡ್ತೀದೀರಿ ಅಂತಾ ಕೂಡ ನನ್ಗೆ ಗೊತ್ತಿಲ್ಲ. ನಾನೀಗ್ತಾನೆ ಒಂದು ವ್ಯಾವಹಾರಿಕ ಸಲಹೆ ಕೊಟ್ಟೆ. ಆದ್ರೆ, ನೀವು ಕಾಜುಹೆ ಮತ್ತು ಅವಳ ಸಂಸಾರದ ಪರಿಸ್ಥಿತೀನ ಗಮನದಲ್ಲಿಟ್ಕೋಬೇಕು. ಹುಡುಗೀನ ಇಲ್ಲಿಗೇ ಕರ್ಕೊಂಡ್ ಬಂದು, ಅವಳ ಕೈನೂ ಹಿಡ್ಕೊಳ್ಳೋದು—ಒಳ್ಳೆ ಉಪಾಯ. ನನಗೀ ವಿಷಯನ ಮನೆಗೆಲಸದವಳು ಹೇಳ್ದಾಗ ನಾನು ಬೆಪ್ಪಾದೆ.

ವಾಟನಬಿ ಮೇಲೇಳುವನು. ಆ ಕೂಡಲೇ ಆತ ಕೋಣೆದಾಟಿ ಆತುರಾತುರವಾಗಿ ಮಹಡಿಗೆ ಹೋಗುವಾಗ ಕ್ಯಾಮರ ಅವನ ಹಿಂದೆಯೇ ಚಲಿಸುವುದು.

ಮೇಲಣ ದೃಶ್ಯ ಕ್ರಮೇಣ ಮಬ್ಬಾಗುತ್ತಾ ಇಲ್ಲವಾಗುವುದು. ಈಗ ಮಬ್ಬಿನಲ್ಲಿ ವಾಟನಬಿಯ ಕಛೇರಿಯ ದೃಶ್ಯ—ಅವನ ಕುರ್ಚಿ ಖಾಲಿ ಇದೆ. ಆ ಕಛೇರಿಯ ಉದ್ಯೋಗಿಗಳು ಪಿಸುಗುಟ್ಟುತ್ತ, ನಗುತ್ತ ಪರಸ್ಪರ ಮಾತಾಡುತ್ತಿರುವುದರ ಅನೇಕ ದೃಶ್ಯಗಳು. ಯಾರೋ ಒಬ್ಬ ಒನೊ ಬಳಿಗೆ ಬಂದು ಕಿವಿಯಲ್ಲಿ ಪಿಸುಗುಟ್ಟುವನು. ವಾಟನಬಿ ಅಲ್ಲಿ ಇಲ್ಲದಿರುವಾಗ ಇನ್ನೇನು ಮುಂಬಡ್ತಿ ಪಡೆಯಲಿರುವ ಒನೊ, ತೃಪ್ತಿಯಿಂದ ನಗುತ್ತಿರುವನು. ಈ ಎಲ್ಲ ವ್ಯಾಪಾರಗಳ ನಡುವೆ ನಿರೂಪಕನ ಧ್ವನಿ ಕೇಳಿಸುವುದು.

ನಿರೂಪಕ (ಅದೃಶ್ಯ): ನಮ್ಮ ಕಥಾನಾಯಕ ಎರಡು ವಾರಗಳಿಂದ ಕಛೇರಿಗೆ ಗೈರು ಹಾಜರಾಗಿರುವನು. ಈ ಅವಧಿಯಲ್ಲಿ ಅನೇಕ ಊಹಾ ಪೋಹಗಳು, ವದಂತಿಗಳು ಪುನರಾವರ್ತನೆಯಾಗಿರುವುದು ಸ್ವಾಭಾವಿಕ. ಈ ಎಲ್ಲ ವದಂತಿಗಳೂ ಒಂದು ತೀರ್ಮಾನಕ್ಕೆ ಬಂದಿವೆ—ಅದೇನೆಂದರೆ ವಾಟನಬಿ ಒಬ್ಬ ಅವಿವೇಕಿಯ ರೀತಿಯಲ್ಲಿ ವರ್ತಿಸುತ್ತಿರುವನೆಂದು. ಇಷ್ಟಾದರೂ ವಾಟನಬಿಗೆ ಅವೇ ನಡವಳಿಕೆಗಳು ಅವನ ಜೀವಿತದ ಅರ್ಥಪೂರ್ಣವಾದ ಮಹತ್ವದ ಕ್ರಿಯೆಗಳಾಗಿವೆ.

ಈಗ ಬೊಂಬೆ ಕಾರ್ಖಾನೆಯ ಒಂದು ಕಿಟಕಿಯ ದೃಶ್ಯ ; ಯಂತ್ರದ ಕರ್ಕಶ ಶಬ್ದ. ಕಿಟಕಿ ದಡಬಡ ಗುಟ್ಟುವುದು, ಕಟ್ಟಡ ನಡುಗುವುದು—ಮೊದಲ ಬೊಂಬೆಗಳನ್ನು ಪೆಟ್ಟಿಗೆಯಲ್ಲಿ ತುಂಬ ಗೋಡೆಯ ಪಕ್ಕ ರಾಶಿ ಹಾಕಲಾಗಿದೆ.

ಈಗ ಕಾರ್ಖಾನೆಯ ಹೊರಗಿನ ದೃಶ್ಯ. ಟೊಯೊ ಮತ್ತು ವಾಟನಬಿ ಮಾತನಾಡುತ್ತಿರುವರು. ಆಕೆ ತಲೆಯ ಸುತ್ತ ಒಂದು ಬಟ್ಟೆ ಸುತ್ತಿರುವಳು. ಕೆಲಸದಲ್ಲಿ ತೊಡಗಿರುವಳು, ಜೊತೆಗೆ ಆಕೆ ಕೋಪಗೊಂಡಿರುವಳು.

ಟೊಯೊ: ಇದೇನು ನಗರಸಭೆಯಲ್ಲ, ತಿಳಿತೇನು ? ಒಂದು ಗಂಟೆ ಕೆಲಸಾ ಮಾಡೋದಿಕ್ಕೆ ಇಲ್ಲಿ ಇಡೀ ಒಂದು ದಿನ ತಗೋಳೊ ಹಾಗಿಲ್ಲ. ಒಂದು ಕ್ಷಣ ವ್ಯರ್ಥವಾದರೂ ಬರೋ ಹಣದಲ್ಲಿ ಅಷ್ಟು ಕೈ ಬಿಟ್ಹೋಗುತ್ತೆ.

ವಾಟನಬಿ: ರಾತ್ರಿ ನನ್ನನ್ನ ಭೇಟಿಯಾಗು—ಈ ರಾತ್ರಿ ಮಾತ್ರ.

ಟೊಯೊ: ರಾತ್ರಿ ನನ್ಗೆ ಬಹಳ ಸುಸ್ತಾಗಿರುತ್ತೆ. ನಾನು ನಿದ್ರೆ ಮಾಡ್ಬೇಕು. ಅದೂ ಅಲ್ಲದೆ, ಪ್ರತಿರಾತ್ರೀನೂ ನೀವು ನಂಜೊತೆ ಹೊರಗಡೆ ಹೋಗೋಕೆ ಯಾಕೆ ಇಚ್ಛಿಸ್ತೀರಿ ? ನಾವಿನ್ನು ಇದನ್ನ ಬಂದ್ ಮಾಡೋಣ. ಇದು...ಇದು ತೀರ ಅಸಹಜ.

ವಾಟನಬಿ: ದಯವಿಟ್ಟು ಇದೊಂದು ರಾತ್ರಿ—ಇದೊಂದು ರಾತ್ರಿ ಮಾತ್ರ.

ಟೊಯೊ: ಇಲ್ಲ, ಇದನ್ನ ನಿಲ್ಲಿಸ್ಲೇಬೇಕು. ದಯವಿಟ್ಟು ಕ್ಷಮಿಸಿ.

ಆಕೆ ಹಿಂದಿರುಗಿ, ಕಾರ್ಖಾನೆಯ ಒಳಗಡೆಗೆ ಓಡಿಹೋಗುವಳು. ಆತ ದೂರ ನಡೆದು ಹೋಗುವನು.

ಈಗ ಬಿಳಿಯ ಕೀಲುಗೊಂಬೆ ಮೊಲಗಳು ತುಂಬಿರುವ ಮೇಜುಗಳು ಮುಂದೆ ವಾಟನಬಿ ಒಬ್ಬನೇ ಇರುವ ದೃಶ್ಯ. ಬಾಗಿಲೊಂದು ತೆರೆಯುವುದು, ಆಕೆ ಅವನ ಬಳಿಗೆ ಬರುವಳು.

ಟೊಯೊ : ಆಯಿತ್ತು, ಬರ್ತೀನಿ. ಆದ್ರೇ ಈ ರಾತ್ರೀನೆ ಖಂಡಿತವಾಗಿ ಕೊನೆಯ ಸಲ.

ಈಗ, ದೊಡ್ಡದಾದ ಸುಂದರ 'ಕಾಫಿ ಹೌಸ್'ನ ಎರಡನೆಯ ಅಂತಸ್ತಿನ ದೃಶ್ಯ. ವಾಟನಬಿ ಒಳ ಬಂದು ಟೊಯೊಳ ಟೇಬಲ್ ಪಕ್ಕ ಕುಳಿತುಕೊಳ್ಳುವನು. ಅವನ ಹಿಂದೆ, ಬಾಲ್ಕನಿಯಲ್ಲಿ, ಹುಡುಗಹುಡುಗಿಯರ ದೊಡ್ಡ ಗುಂಪೊಂದು ಇರುವುದು. ರೆಕಾರ್ಡ್ ಪ್ಲೇಯರ್‌ನಲ್ಲಿ ಸಾಲ್ಡಿನಿಯ "ವಾಲ್ಸಿಂಗ್ ಡಾಲ್" ಎಂಬ ಗೀತೆ ಕೇಳಿಬರುತ್ತಿರುವುದು. ದೊಡ್ಡ ಬರ್ತ್‌ಡೇ ಕೇಕ್ ಒಂದನ್ನು ಮಹಡಿಯ ಮೇಲಕ್ಕೆ ತರುತ್ತಿರುವಂತೆಯೇ ಹುಡುಗಹುಡುಗಿಯರು ಬಹು ಸಂಭ್ರಮದಿಂದ ಮಾತನಾಡುತ್ತಿರುವರು. ಟೊಯೊ ತನ್ನ ಪಕ್ಕದ ಜೋಡಿಯೊಂದನ್ನು ನೋಡುವಳು ; ಅನಂತರ ಬರ್ತ್‌ಡೇ ಪಾರ್ಟಿ ಕಡೆಗೆ ನೋಡುವಳು ; ಅನಂತರ ಆಕೆ ಆಕಳಿಸುವಳು. ವಾಟನಬಿ ಆಕೆಯ ಕಡೆ ನೋಡುತ್ತ ಮುಂದಕ್ಕೆ ಬಾಗುವನು.

ವಾಟನಬಿ : ನಾವು ಸ್ವಲ್ಪ ದೂರ ನಡೆಯೋಣ.

ಟೊಯೊ : ಬೇಡ, ಧನ್ಯವಾದಗಳು. ನಡೆದ ಅನಂತರ ಮತ್ತೆ ಮಾಡಲ್ ಶಾಪ್‌ಗೆ ಹೋಗೋದು ; ಅದರ ನಂತರ ಮತ್ತೆ ಐಸ್‌ಕ್ರೀಂ ಪಾರ್ಲರ್‌ಗೆ ಹೋಗೋದು. ಇದರಿಂದ ಪ್ರಯೋಜನವೇನು ? ನಂಗೊತ್ತು, ನಾನು ಕೃತಜ್ಞಳಲ್ಲ ಅಂತಾ ; ಆದ್ರೆ ನಂಗೆ ಬಹಳ ಬೋರಾಗಿದೆ. ನಾವು ಮಾತ್ನಾಡೋದಿಕ್ಕೆ ಇನ್ನೇನೂ ಉಳಿದಿಲ್ಲ.

ಈಗ ವಾಟನಬಿ ಆಕೆಯನ್ನು ನೋಡುತ್ತಿರುವನು ; ಆತ ತಲೆ ತಗ್ಗಿಸುವನು.

ಟೊಯೊ : ಮತ್ತೆ ಅದೇ ಥರ ಮುಖ, ಇಳಿಬಿಡ್ತೀರಿ...

ಈಗ ಆಕೆಯ ಕ್ಲೋಸ್-ಅಪ್.

ಟೊಯೊ : ನೀವು ನನ್ನ ತಾಳ್ಮೆ ಕೆಡೋ ಹಾಗೆ ಮಾಡ್ತಿದೀರಿ. ನನ್ನ ಬಗ್ಗೆ ನೀವು ಯಾಕೆ ಇಷ್ಟೊಂದು ಕಾಳಜಿ ತೋರಿಸ್ತೀರಿ ?

ವಾಟನಬಿ : ಅದು, ಯಾಕಂದ್ರೆ...

ಟೊಯೊ : ಹೇಳಿ, ಯಾಕೆ ?

ವಾಟನಬಿ : ಇನ್ನೇನಿಲ್ಲ, ನಿಂಜೊತೆ ಇದ್ರೆ ನಂಗೆ ಖುಷಿಯಾಗುತ್ತೆ.

ಟೊಯೊ : ಇದು ಪ್ರೀತಿಯಲ್ಲ, ಅಂತಾ ನನ್ನ ಭಾವನೆ.

ವಾಟನಬಿ : ಅಲ್ಲ, ಖಂಡಿತವಾಗಿಯೂ ಪ್ರೀತಿಯಲ್ಲ.

ಟೊಯೊ : ನಿಮಗೇನು ಅನ್ಸುತ್ತೆ ಅಂಥಾ ನಿವ್ಯಾಕೆ ಸ್ಪಷ್ಟವಾಗಿ ಮಾತಾಡೊಲ್ಲ.

ಈಗ ವಾಟನಬಿ ದೃಷ್ಟಿಯನ್ನು ಕೆಳಗೆ ತಗ್ಗಿಸುವ ದೃಶ್ಯ.

ಟೊಯೊ : (ಮುಂದಕ್ಕೆ ಸಾಗುತ್ತ) ನಿಮಗೆ ಕೋಪವೇನು ?

ವಾಟನಬಿ : ಇಲ್ಲ. ನನಗೊಂದು ಅರ್ಥವಾಗ್ತಿಲ್ಲ...(ಅವನ ಕ್ಲೋಸ್-ಅಪ್) ನಾನು ನಿಂಜೊತೆ ಇರೋದಿಕ್ಕೆ ಇಚ್ಛೆಪಡ್ತೀನಿ, ಯಾಕೆ...ನನಗೆ ಗೊತ್ತಿರೋದು ಇಷ್ಟು...

ಈಗ ಅವರಿಬ್ಬರೂ ಟೇಬಲ್ ಮುಂದೆ ಕುಳಿತಿರುವ ದೃಶ್ಯ. ರೆಕಾರ್ಡ್ ಪ್ಲೇಯರ್‌ನಿಂದ 'ದಿ ಮಾರ್ಚ್ ಆಫ್ ದಿ ವುಡನ್ ಸೋಲ್ಜರ್ಸ್' ಎಂಬ ಹಾಡು ಪ್ರಾರಂಭವಾಗುವುದು.

ವಾಟನಬಿ :......ನಾನು ಸದ್ಯದಲ್ಲೇ ಸಾಯ್ತೀನಾ ಅಂತಾ; ನನ್ಗೆ ಗ್ಯಾಸ್ಟ್ರಿಕ್ ಕ್ಯಾನ್ಸರ್ ಇದೆ.

ಈಗ ಆಕೆಯ ಕ್ಲೋಸ್-ಅಪ್ ; ಈಗ ಆತನ ಕ್ಲೋಸ್-ಅಪ್—ಆತ ತನ್ನ ಕೈಗಳನ್ನು ಅದುಮುವನು.

ವಾಟನಬಿ : ಇದೋ ಇಲ್ಲಿ. ನಿಂಗೆ ಅರ್ಥವಾಯ್ತೇನು ? ನಾನಿನ್ನು ಆರುತಿಂಗಳು ಕೂಡ ಬದುಕಿರೋದಿಲ್ಲ. ನನ್ಗೆ ಇದರ ಅರಿವು ಯಾವಾಗಾಯ್ತೋ...ಆ ನಂತರ... ಅದ್ಹೇಗೋ...ನಿನ್ನತ್ತ ಆಕರ್ಷಿತನಾದೆ. ನಾನು ಚಿಕ್ಕ ಹುಡುಗನಾಗಿದ್ದಾಗ ಒಂದು ಸಾರಿ ನೀರಿನಲ್ಲಿ ಮುಳುಗೋಗಿದ್ದೆ. ಈಗಲೂ ಅದೇ ಥರ ಅನುಭವ ವಾಗ್ತಿದೆ. ಸುತ್ತಲೂ ಅಂಧಕಾರ, ನಾನು ಎಷ್ಟೇ ಪ್ರಯತ್ನಿಸಿದ್ರೂ ಮುಳು ಗ್ತಿರೋ ನನ್ಗೆ ಆಸರೆಯಾಗಿ ಏನೂ ಕೈಗೆ ಸಿಗ್ತಿಲ್ಲ. ಈಗ ನೀನೊಬ್ಬಳೇ ಒಬ್ಬಳು ಆಸರೆಯಾಗಿದಿಯಾ.

ಆಕೆಯ ಕ್ಲೋಸ್-ಅಪ್— ಆಕೆ ತೀರ ಅಸ್ವಸ್ಥಳಾದವಳಂತೆ ಕಾಣುವಳು.

ಟೊಯೊ : ನಿಮ್ಮ ಮಗನ ವಿಷಯ ಏನು ?

ಈಗ ಅವರಿಬ್ಬರನ್ನೂ ಒಳಗೊಂಡ ದೃಶ್ಯ. ಟೊಯೊ ಕ್ಯಾಮರಾಕ್ಕೆ ಬೆನ್ನು ಮಾಡಿರುವಳು.

ವಾಟನಬಿ : ಅವನ ಸುದ್ದಿ ಮಾತಾಡ್ಬೇಡ. ನನ್ಗೆ ಯಾವ ಮಗನೂ ಇಲ್ಲ. ನಾನು ಒಬ್ಬೊಂಟಿ.

ಟೊಯೊ : ನೀವು ಈರೀತಿ ಮಾತಾಡಬಾರ್ದು.

ವಾಟನಬಿ : ನಿನ್ಗೆ ಇದು ಅರ್ಥವಾಗೊಲ್ಲ. ನನ್ನ ಮಗ ನನ್ನಿಂದ ಎಲ್ಲೋ ಬಹು ದೂರದಲ್ಲಿದ್ದಾನೆ—ನಾನು ಮುಳುಗಿಹೋಗುತ್ತಿದ್ದಾಗ ನನ್ನ ತಂದೆ ತಾಯಿಗಳು ಎಲ್ಲೋ ದೂರದಲ್ಲಿದ್ರಲ್ಲಾ ಹಾಗೆ. ಇದನ್ನ ಯೋಚಿಸಿದ್ರೆ ನನ್ಗೆ ಸಹಿಸಿ ಕೊಳ್ಳೋಕೆ ಆಗಲ್ಲ.

ಟೊಯೊ : ಆದ್ರೆ, ನಾನು ನಿಮಗೆ ಯಾವರೀತಿ ಆಸರೆಯಾಗಿದಿನಿ ?

ವಾಟನಬಿ : ನೀನು...ಹೇಳ್ತೀನಿ. ನಿನ್ನನ್ನ ಸುಮ್ನೆ ನೋಡ್ತಿದ್ರೆ ಸಾಕು ನನ್ನ ಮನಸ್ಸು ಉಲ್ಲಾಸಗೊಳ್ಳುತ್ತೆ. (ಆತ ದೃಷ್ಟಿ ಕೆಳಗೆ ಹಾಕುವನು). ಈ ನನ್ನ ಹೆಣದ ಹೃದಯ ಬೆಚ್ಚಗಾಗುತ್ತೆ. ಮತ್ತೆ, ನನ್ನ ಬಗ್ಗೆ ನಿನ್ಗೆ ಕರುಣೆಯಿದೆ. ಅಲ್ಲ, ಅದಲ್ಲ ಕಾರಣ. ನನಗೆ ಯಾಕೆ ಸಂತೋಷವಾಗುತ್ತೆ ಅಂದ್ರೆ ನಿನ್ನಲ್ಲಿನ್ನು ಯೌವನವಿದೆ, ತುಂಬು ಆರೋಗ್ಯವಿದೆ. ಇಲ್ಲ, ಈ ಎರಡು ಕಾರಣವೂ ಅಲ್ಲ. (ಆತ ಮೇಲೇಳುವನು, ಆಕೆಯ ಟೇಬಲ್ ಪಕ್ಕಕ್ಕೆ ಬರುವನು, ಕುಳಿತುಕೊಳ್ಳುವನು, ಆಕೆ ಗಲಿಬಿಲಿಗೊಂಡು ಹಿಂದೆ ಸರಿಯುವಳು, ಇನ್ನೂ ದೂರಕ್ಕೆ ಸರಿಯಲು ಪ್ರಯತ್ನಿಸುವಳು) ನಿನ್ನಲ್ಲಿ ಜೀವನೋತ್ಸಾಹ ತುಂಬಿ ತುಳುಕುತ್ತಿದೆ. ಮತ್ತೆ...ಮತ್ತೆ...ನನ್ಗೆ ಅದನ್ನು ಕಂಡ್ರೆ ಹೊಟ್ಟೆಕಿಚ್ಚು. ನಾನು ಸಾಯೋಕೆ ಮುಂಚೆ ಒಂದೇ ಒಂದು ದಿನ ನಿನ್ನ ಹಾಗೆ ಆರೋಗ್ಯವಾಗಿ ಇರಬೇಕೂ ಅಂತಾ ಆಸೆ. ನಾನು ಆ ರೀತಿ ಆಗ್ದೇನೆ ಸಾಯೋಕೆ ಆಗೋದಿಲ್ಲ. ಓಹ್, ನಾನು ಏನಾದ್ರೂ ಮಾಡಲೇಬೇಕು. ನೀನು ಮಾತ್ರ ನನ್ಗೆ ದಾರಿ ತೋರಿಸೋಕೆ ಸಾಧ್ಯ. ಆದ್ರೆ ಏನ್ ಮಾಡ್ಬೇಕು ಅಂತ ನನ್ಗೇ ಗೊತ್ತಿಲ್ಲ ; ಬಹುಶಃ ನಿನ್ಗೂ ಗೊತ್ತಿಲ್ಲದಿರಬಹುದು ; ಆದ್ರೆ, ನಿನ್ಗೆ ಗೊತ್ತಿದ್ರೆ ನಿನ್ನ ಥರ ಇರೋದು ಹೇಗೆ ಅಂತಾ ದಯವಿಟ್ಟು ತಿಳಿಸು.

ಟೊಯೊ : ನನಗೇನೂ ಗೊತ್ತಿಲ್ಲ.

ವಾಟನಬಿ : ನಾನು ನಿನ್ನ ಥರ ಇರೋದು ಹೇಗೆ ?

ಟೊಯೊ : ನಾನು ಮಾಡೋದಿಷ್ಟೆ—ದುಡಿತೀನಿ, ತಿಂತೀನಿ.

ವಾಟನಬಿ : ಹಾಗೇನು ?

ಟೊಯೊ : ಹೌದು, ಜೊತೆಗೆ ಈ ಥರ ಬೊಂಬೆ ತಯಾರಿಸ್ತೀನಿ.

ಆಕೆಯು ಜೇಬಿನಲ್ಲಿ ಮೊಲದ ಬೊಂಬೆಯೊಂದು ಇರುವುದು. ಆಕೆ ಅದನ್ನು ಹೊರಗೆ ತೆಗೆದು, ಅದಕ್ಕೆ ಕೀಲು ಕೊಟ್ಟು, ಅದನ್ನು ಮುಂದಿರುವ ಟೇಬಲ್ ಮೇಲೆ ಬಿಡುವಳು. ಮೊಲ ಅವನತ್ತ ನೆಗೆಯುವುದು. ಆಕೆ ಮತ್ತೆ ಅದನ್ನು ತೆಗೆದುಕೊಂಡು, ಪುನಃ ನೆಗೆಯಲು ಬಿಡುವಳು.

ಟೊಯೊ : ಇಷ್ಟೇ ನಾನು ಮಾಡೋದು ; ಆದ್ರೆ ಇದು ಒಳ್ಳೆ ತಮಾಷೆಯಾಗಿರುತ್ತೆ. ಜಪಾನಿನ ಇಂದಿನ ಎಲ್ಲ ಮಕ್ಕಳೂ ನನ್ನ ಸ್ನೇಹಿತರು ಅನ್ನೋ ಭಾವನೆ ನನಗಿದರಿಂದ ಉಂಟಾಗಿದೆ, ಮಿಸ್ಟರ್ ವಾಟನಬಿ ನೀವೂ ಕೂಡ ಇದೇ ಥರ ಏನಾದರೂ ಯಾಕೆ ಮಾಡಬಾರ್ದು ?

ವಾಟನಬಿ : ನಾನು ಕಛೇರಿಲಿ ಏನ್ ಮಾಡೋಕೆ ಸಾಧ್ಯ ?

ಟೊಯೊ : ಅದೂ ನಿಜ ಅನ್ನಿ. ಸರಿ, ಹಾಗಿದ್ಮೇಲೆ ಆ ಕೆಲಸಕ್ಕೆ ರಾಜೀನಾಮೆ ಕೊಟ್ಟು ಬೇರೆ ಇನ್ನೇನಾದ್ರೂ ಕೆಲಸ ನೋಡಿ.

ವಾಟನಬಿ : ಈಗ ಕಾಲ ಮೀರಿಹೋಗಿದೆ.

ಈಗ ಆಕೆ ಅವನನ್ನು ನೋಡುತ್ತಿರುವ ದೃಶ್ಯ ; ಈಗ ಅವರಿಬ್ಬರ ನಡುವೆ ಮೊಲದ ಕೀಲುಗೊಂಬೆಯಿರುವಂತೆಯೇ, ಅವರಿಬ್ಬರನ್ನೂ ಒಳಗೊಂಡಂತೆ ದೃಶ್ಯ.

ವಾಟನಬಿ : ಇಲ್ಲ, ಕಾಲ ಮಿಂಚಿಲ್ಲ. ಅದು ಅಸಾಧ್ಯವೇನಲ್ಲ.

ಈಗ ವಾಟನಬಿಯ ಕಣ್ಣಲ್ಲಿ ನೀರು ತುಂಬಿಕೊಂಡಿರುವ ದೃಶ್ಯ. ಆಕೆ ಹೆದರಿಕೊಂಡಿರುವಳು. ಹಿಂದಕ್ಕೆ ಸರಿಯುವಳು, 'ದಿ ಮಾರ್ಚ್ ಆಫ್ ದಿ ವುಡನ್ ಸೋಲ್ಜರ್ಸ್' ಹಾಡಿನ ಧ್ವನಿ ಜೋರಾಗುವುದು. ಆತ ನಗುತ್ತ ತಕ್ಷಣ ಅವಳ ಕಡೆಗೆ ತಿರುಗುವನು, ಆಕೆ ಇನ್ನೂ ಹಿಂದೆ ಸರಿದು ಮುದುರಿಕೊಳ್ಳುವಳು.

ವಾಟನಬಿ : ನಾನು ಮನಸ್ಸು ಮಾಡಿದ್ರೆ ಖಂಡಿತ ಏನಾದ್ರೂ ಮಾಡಬಹುದು.

ಆತ ಮೊಲದ ಗೊಂಬೆ ಎತ್ತಿಕೊಳ್ಳುವನು. ಈಗ ಬಾಲ್ಕನಿಯ ಕಂಬಿಯನ್ನು ಹುಡುಗ ಹುಡುಗಿಯರು ಒರಗಿನಿಂತಿರುವ ದೃಶ್ಯ.

ಹುಡುಗಹುಡುಗಿಯರು : ಅಗೋ ಅವಳು ಬಂದಳು. ನಿನಗೆ ಹುಟ್ಟಿದ ಹಬ್ಬದ ಶುಭಾಶಯಗಳು, ಹ್ಯಾಪಿ ಬರ್ತ್‌ಡೇ ಟು ಯೂ.

ವಾಟನಬಿ ಅವರ ಗುಂಪಿನ ನಡುವೆ ಬಿರುಬಿರನೆ ಮೆಟ್ಟಲಿಳಿಯತೊಡಗುವನು ; ಕೈಯಲ್ಲಿ ಮೊಲದ ಗೊಂಬೆ ಹಿಡಿದಿರುವನು. ಹುಡುಗಹುಡುಗಿಯರು "ಹುಟ್ಟುಹಬ್ಬದ ಶುಭಾಶಯಗಳು" ಎಂದು ಹಾಡು ಹೇಳುತ್ತಿರುವಂತೆಯೇ, ಆ ದಿನ ಹುಟ್ಟು ಹಬ್ಬವನ್ನು ಆಚರಿಸುತ್ತಿರುವ ಹುಡುಗಿ ನಗುತ್ತ ಮಹಡಿಯ ಮೆಟ್ಟಿಲು ಹತ್ತಿ ಬರುತ್ತಿರುವಳು.

ಈಗ ಟೊಯೊ ಒಂಟಿಯಾಗಿ ಕುಳಿತಿರುವ ದೃಶ್ಯ. ಹುಟ್ಟುಹಬ್ಬದ ಸಮಾರಂಭದಲ್ಲೀಗ ಗದ್ದಲ, ಸಂಭ್ರಮ ತುಂಬಿತುಳುಕುತ್ತಿದೆ; ಆದರೂ ಆಕೆ ಅತ್ತ ನೋಡಲು ಹಿಂದಿರುಗುವುದಿಲ್ಲ. ನೆಟ್ಟನೋಟದಿಂದ ಸುಮ್ಮನೆ ಮುಂದೆ ನೋಡುತ್ತ ಕುಳಿತಿರುವಂತೆಯೇ ಆ ದೃಶ್ಯ ಕ್ರಮೇಣ ಇಲ್ಲವಾಗುವುದು.

ಈಗ ನಾಗರಿಕ ವಿಭಾಗದ ದೃಶ್ಯ. ಒನೊ ಕಛೇರಿಗೆ ಬರುತ್ತಿರುವನು, ಅವನ ಹಿಂದೆ ಸಯಿಟೊ ಬರುತ್ತಿರುವನು. ಇವರಿಬ್ಬರೂ ನಡೆದು ಬರುತ್ತಿರುವಂತೆಯೇ ಕ್ಯಾಮರ ಕೂಡ ಅವರ ಜೊತೆ ಚಲಿಸುತ್ತಿದೆ.

ಒನೊ : ಓಹ್, ಅವರು ಇನ್ನೇನು ರಾಜೀನಾಮೆ ಕೊಡ್ತಾರೆ—ಅವರ ಮಗ ಇಲ್ಲಿಗೆ ಬಂದು ಅವರ ವಿಶ್ರಾಂತಿವೇತನದ ಬಗ್ಗೆ ಕೇಳ್ತಿದ್ದ.

ಸಯಿಟೊ : ಹಾಗಿದ್ರೆ, ಇನ್ನೇನು ನಮ್ಮ ಮುಂದಿನ ಬಾಸ್ ನೀವೇ ಅಲ್ವೇನು ?

ಒನೊ ತೃಪ್ತನಾಗಿ ನಕ್ಕರೂ ಗಾಂಭೀರ್ಯದ ಸೋಗು ಹಾಕುವನು.

ಒನೊ : ಈಗ್ಲೇ ಏನನ್ನೂ ಹೇಳೋದು ಕಷ್ಟ.

ಆತ ಇನ್ನೇನು ತನ್ನ ಕೋಟನ್ನು ನೇತುಹಾಕಬೇಕು, ಅಷ್ಟರಲ್ಲಿ ಅವರಿಬ್ಬರೂ ಈಗಾಗಲೇ ಆ ಜಾಗದಲ್ಲಿ ನೇತುಹಾಕಿರುವ ವಾಟನಬಿಯ ಹೊಸ ಹ್ಯಾಟನ್ನು ನೋಡುವರು; ಅವನ ಡೆಸ್ಕ್ ಕಡೆಗೆ ನೋಡುವರು. ಈಗ ಡೆಸ್ಕ್‌ನ ದೃಶ್ಯ. ವಾಟನಬಿ ಏನನ್ನೋ ಹುಡುಕಾಡುತ್ತಿರುವನು, ಅದು ಸಿಗುವುದು, ಅನಂತರ ಆತ ಕುಳಿತುಕೊಳ್ಳುವನು. ಒನೊ ಮತ್ತು ಸಯಿಟೊ ಆಶ್ಚರ್ಯಚಕಿತರಾಗಿರುವರು. ಅವರಿಬ್ಬರೂ ವಾಟನಬಿಯ ಡೆಸ್ಕ್ ಕಡೆಗೆ ನಡೆದು ಬರುವರು. ಆತ ತಲೆಎತ್ತಿ ಅವರ ಕಡೆ ನೋಡುವನು.

ವಾಟನಬಿ : ಒನೊ, ಇಗೋ, ಇದರ ಬಗ್ಗೆ ನಿಗಾ ಇಡು.

'ಕೊಳಚೆ ಪ್ರದೇಶದ ಸುಧಾರಣೆಗೆ ಮನವಿ—ಕುರೋಚೋ ಮಹಿಳಾ ಸಂಘ' ಎಂದು ಫೈಲ್ ಮೇಲೆ ಬರೆದಿರುವ ದಾಖಲೆ ಪತ್ರವನ್ನು ಒನೊ ಕೈಗೆ ಕೊಡುವನು. "ಈ ಮನವಿಯನ್ನು ಸೂಕ್ತ ಕ್ರಮಕ್ಕಾಗಿ ಲೋಕೋಪಯೋಗಿ ವಿಭಾಗಕ್ಕೆ ಕಳುಹಿಸಬೇಕು" ಎಂಬ ಸೂಚನೆಯನ್ನು ಬರೆದು ಆ ದಾಖಲೆಪತ್ರದೊಡನೆ ಲಗತ್ತಿಸಲಾಗಿದೆ. ಫೈಲ್ ಕೊಡುವಾಗ ವಾಟನಬಿ ಆ ಸೂಚನೆಯನ್ನು ಹರಿದುಹಾಕುವನು.

ಒನೊ : ಆದರೆ, ಈ ಮನವಿ ಖಂಡಿತ ಹೋಗ್ಲೇಬೇಕು...

ವಾಟನಬಿ : ಬೇಕಾಗಿಲ್ಲ; ಇದರ ಬಗ್ಗೆ ನಾವೇ ಏನಾದರೂ ಕ್ರಮ ತಗೊಳ್ಳದಿದ್ರೆ ಮುಂದೆ ಏನೂ ಮಾಡೋಕೆ ಸಾಧ್ಯವಿಲ್ಲ. ಲೋಕೋಪಯೋಗಿ ವಿಭಾಗದವರು, ಪಾರ್ಕ್ ವಿಭಾಗದವರು ಒಳಚರಂಡಿ ವಿಭಾಗದವರು—ಎಲ್ಲರೂ

ಖಂಡಿತ ಸಹಕಾರ ನೀಡಬೇಕು. ಈ ಕೂಡ್ಲೆ ಒಂದು ಕಾರ್ ಬರಹೇಳು. ನಾನೊಂದು ತನಿಖೆ ನಡೆಸಿ, ಈ ದಿನವೇ ಒಂದು ವರದಿ ತಯಾರಿಸಬೇಕು.

ಒನೊ : ಆದ್ರೆ, ಇದು ಬಹಳ ಕಷ್ಟವಾಗುತ್ತೆ.

ವಾಟನಬಿ : ಇಲ್ಲ, ನಾವು ದೃಢಸಂಕಲ್ಪ ಮಾಡಿದ್ರೆ, ಕಷ್ಟವೂ ಆಗೊಲ್ಲ, ಎಂಥದೂ ಆಗೊಲ್ಲ.

ವಾಟನಬಿ ತನ್ನ ಕೋಟನ್ನು ಆತುರಾತುರವಾಗಿ ಹಾಕಿಕೊಳ್ಳುತ್ತಿರುವ ಹಾಗೆಯೇ ಕ್ಯಾಮರಾ ಕೂಡ ಹಾಗೇ ಚಲಿಸುವುದು. ಮಧ್ಯಾಹ್ನದ ಫ್ಯಾಕ್ಟರಿಯ ಕೂಗು (ಸೈರನ್) ಕೇಳಿಸುವುದು. ಒನೊ ವಾಟನಬಿಯನ್ನು ಹಿಂಬಾಲಿಸುವ ಆತುರದಲ್ಲಿರುವಷ್ಟರಲ್ಲಿ ಆತ ಬಾಗಿಲು ದಾಟಿ ಹೋಗಿರುವನು. ಈಗ ಹೊರಗೆ ಸಣ್ಣಗೆ ಮಳೆ ಬೀಳುತ್ತಿರುವ ದೃಶ್ಯ. ಬಾಗಿಲು ಅತ್ತ ಇತ್ತ ಅಲ್ಲಾಡುತ್ತಿದೆ, ಒನೊ ಚಿಂತಾಮಗ್ನನಾಗಿ ವಾಟನಬಿಯನ್ನು ಹಿಂಬಾಲಿಸುವನು. 'ಹ್ಯಾಪಿ ಬರ್ತ್ ಡೇ' ಎಂಬ ಹಾಡಿನ ಅಂತಿಮ ಚರಣವನ್ನು ನುಡಿಸುತ್ತಿರುವ ತುತ್ತೂರಿಯ (ಟ್ರಂಪೆಟ್ಸ್) ಶಬ್ದ ದೂರದಿಂದ ಕೇಳಿಬರುತ್ತಿದೆ.

ನಿರೂಪಕ (ಅದೃಶ್ಯ) : ಐದು ತಿಂಗಳ ಅನಂತರ ಈ ಕಥೆಯ ನಾಯಕ ನಿಧನನಾದ.

ಸಮಾಧಿ ಪೀಠದ ಮೇಲೆ ವಾಟನಬಿಯ ಭಾವಚಿತ್ರವಿದೆ. ಈಗ ಇಡೀ ಸಮಾಧಿಪೀಠದ ದೃಶ್ಯ. ಸಮಾಧಿ ಪೀಠ ವಾಟನಬಿಯ ಕೊಠಡಿಯಲ್ಲಿದೆ. ಅಂತ್ಯಕ್ರಿಯೆಯ ಸಾಮುಗ್ರಿಗಳು ತುಂಬಿರುವುದರಿಂದ ಅದು ವಾಟನಬಿಯ ಕೊಠಡಿ ಎಂದು ಪತ್ತೆ ಹಚ್ಚುವುದು ಕಷ್ಟ. ಎಲ್ಲವೂ ನಿಶ್ಚಲವಾಗಿದೆ; ಎಲ್ಲೋ ಅಲ್ಪಸ್ವಲ್ಪ ಚಟುವಟಿಕೆ ಮಾತ್ರ ಕಂಡುಬರುತ್ತಿದೆ. ವಾಟನಬಿಯ ಇಡೀ ಕುಟುಂಬ, ವಾಟನಬಿಯ ಕಛೇರಿಯ ಎಲ್ಲ ಸಿಬ್ಬಂದಿವರ್ಗ, ಜೊತೆಗೆ ಉಪಮೇಯರ್—ಈ ಎಲ್ಲರೂ ಅಲ್ಲಿ ನೆರೆದಿರುವರು. ಸಮಾಧಿಪೀಠದ ಎರಡೂ ಪಕ್ಕದಲ್ಲಿ ಸಾಲಾಗಿ ಹಾಕಿರುವ ಮೆತ್ತೆಗಳಲ್ಲಿ ಅವರೆಲ್ಲ ಕುಳಿತಿರುವರು; ಮದ್ಯ ಸೇವಿಸುತ್ತಿರುವರು. ಕಾರೊಂದು ಬರುತ್ತಿರುವ, ಬಂದು ನಿಂತ ಶಬ್ದ ಕೇಳಿಸುವುದು. ಈಗ ಉಪಮೇಯರ್ ಆ ಕಾರಿನ ಶಬ್ದವನ್ನು ಆಲಿಸುತ್ತಿರುವ ದೃಶ್ಯ. ಮೃತ್ಸುವಿನ ಹೆಂಡತಿ ಎದ್ದು ನಡುಮನೆಗೆ ಹೋಗುವಳು; ನಡುಮನೆಯ ದೃಶ್ಯ. ವರದಿಗಾರರ ಗುಂಪೊಂದು ಸೇರಿದೆ.

ವರದಿಗಾರರು : ನಾವು ಸ್ವಲ್ಪ ಉಪಮೇಯರ್ ಅವರನ್ನ ನೋಡ್ಬೇಕಿದೆ, ದಯವಿಟ್ಟು ಕೆಲವೇ ನಿಮಿಷಗಳು, ಅಷ್ಟೆ.

ಈಗ ಆರಾಧನೆ ನಡೆಯುತ್ತಿರುವ ಕೊಠಡಿಯ ದೃಶ್ಯ. ಒನೊ ಬಂದು ಮೇಯರ್ ಅವರ ಕಿವಿಯಲ್ಲಿ ಏನೋ ಪಿಸುಗುಡುವನು.

ಒನೊ : ಸರ್, ಆ ವರದಿಗಾರರು......

ಈಗ ಮೇಯರ್ ಸೌಜನ್ಯದಿಂದ ಕೊಠಡಿಯ ಹೊರಗೆ ಹೋಗುತ್ತಿರುವ ದೃಶ್ಯ. ಈಗ ನಡುಮನೆಯ ದೃಶ್ಯ.

ಮೇಯರ್ : ಈಗ ಏನ್ ವಿಷಯ—ನಿಮ್ಮ ಅಭಿಪ್ರಾಯ—ನನ್ನ ಆತ್ಮಸಾಕ್ಷಿ ನಿರ್ಮಲವಾಗಿದೆ.

ವರದಿಗಾರ : ನಿಮಗೆ ಸರಿಯಾಗಿ ಗೊತ್ತ ? ನಾವು ಕೆಲವು ವಿಷಯಗಳನ್ನು ಪತ್ತೆ ಮಾಡ್ತಿದೀವಿ.

2 ನೆಯ ವರದಿಗಾರ : ನೀವು ಮತ್ತು ಪಾರ್ಕ್ ವಿಭಾಗದವರು, ಇದರ ಎಲ್ಲ ಗೌರವ ಕೀರ್ತಿಯೂ ನಮ್ಮದು, ಅಂತೇನೊ ಹೇಳ್ತಿದೀರಿ. ಆದರೆ ವಾಸ್ತವವಾಗಿ ಆ ಪಾರ್ಕ್ ನಿರ್ಮಾಣವಾಗಿದ್ದು ವಾಟನಬಿಯವರಿಂದಲ್ವೇನು ?

ಮೇಯರ್ : ಅವರು ಮುಖ್ಯಸ್ಥರಾಗಿದ್ದದ್ದು ನಾಗರಿಕ ವಿಭಾಗದಲ್ಲಿ. ಪಾರ್ಕ್ ವಿಷಯವೆಲ್ಲ ಸಂಬಂಧಪಡೋದು ಪಾರ್ಕ್ ವಿಭಾಗಕ್ಕೆ.

2 ನೆಯ ವರದಿಗಾರ : ಅದು ನಮಗೂ ಗೊತ್ತಿದೆ ; ಆದರೆ ನಮಗೀಗ ತಿಳಿಬೇಕಾಗಿರೋದು, ಇಷ್ಟೆಲ್ಲ ಕೆಲಸಗಳನ್ನು ಮಾಡಿದೋರು ಯಾರು ಅಂತಾ. ವಾಟನಬಿಯವರೇ ಇದನ್ನೆಲ್ಲ ಮಾಡಿದ್ದು ಅನ್ನೋದು ಆ ಸುತ್ತಮುತ್ತ ಇರುವ ಜನರ ಅಭಿಪ್ರಾಯವಾಗಿದೆ. ಜೊತೆಗೆ ವಾಟನಬಿಯವರು ಅದೇ ಪಾರ್ಕಿನಲ್ಲಿ ತೀರಿಕೊಂಡಿದ್ದು ಜನರಲ್ಲಿ ಕುತೂಹಲಕ್ಕೆ ಕಾರಣವಾಗಿದೆ.

ಮೇಯರ್ : ಈಗ ನಿಮ್ಮ ಮಾತಿನ ಅರ್ಥವೇನು ?

3 ನೆಯ ವರದಿಗಾರ : ಇದರಲ್ಲೇನೊ ವಿಚಿತ್ರ ನಡೀತಿದೆ ಅನ್ನೋದು ಜನರ ಭಾವನೆ. ಉದಾಹರಣೆಗೆ ಹೇಳೋದಾದ್ರೆ, ನೀವು ನಿಮ್ಮ ಉದ್ಘಾಟನಾ ಭಾಷಣದಲ್ಲಿ ವಾಟನಬಿಯವರ ಹೆಸರು ಕೂಡ ಪ್ರಸ್ತಾಪಿಸ್ಲಿಲ್ಲ. ನೀವೀರೀತಿ ಮಾಡಿದ್ದು ಸರಿಯಲ್ಲ ಅಂಥಾ ಅಲ್ಲಿನ ಜನ ಹೇಳ್ತಿದಾರೆ.

ಮೇಯರ್ : ಆ ರೀತಿ ಮಾಡಿದ್ದು ತಪ್ಪಾದ್ರೆ, ಇನ್ಯಾವರೀತಿ ಮಾಡಿದ್ರೆ ಸರಿಯಾಗಿರ್ತಿತ್ತಂತೆ ?

2 ನೆಯ ವರದಿಗಾರ : ಬಹುಶಃ ನಿಮ್ಮದು ರಾಜಕೀಯ ಭಾಷಣವಾಗಿರಬೇಕು.

ಮೇಯರ್ ನಗಲು ಪ್ರಯತ್ನಿಸುವನು. ಅದೇ ಕ್ಷಣದಲ್ಲಿ ಕ್ಯಾಮರಾದ ಫ್ಲಾಶ್ ಬೆಳಕು ಫಕ್ಕನೆ ಬಂದು ಆರಿಹೋಗುವುದು. ಅವನ ಛಾಯಾಚಿತ್ರವನ್ನು ತೆಗೆದುಕೊಳ್ಳಲಾಗಿದೆ. ಆತ ಸಹನೆ ಕಳೆದುಕೊಂಡಿರುವನು.

3 ನೆಯ ವರದಿಗಾರ : ಮತ್ತೆ, ವಾಟನಬಿಯವರನ್ನು ಎಲ್ಲೋ ದೂರದಲ್ಲಿ ಕೂರಿಸಿ, ಅವರನ್ನು ಸಂಪೂರ್ಣ ನಿರ್ಲಕ್ಷಿಸಲಾಗಿತ್ತು. ಆ ರೀತಿ ಪಾರ್ಕ್‌ನಲ್ಲಿ ಅವರು

ಸಾಯಬೇಕಾದ್ರೆ ಅದರ ಹಿಂದೆ ಏನೋ ಇದೆ ಅಂತಾ ಅಲ್ಲಿನ ಜನ ಆಡಿಕೋತಿದಾರೆ.

ಮೇಯರ್ : ಅವರು ಪಾರ್ಕ್‌ನಲ್ಲಿ ಆತ್ಮಹತ್ಯೆ ಮಾಡಿಕೊಂಡಿದಾರೆ ಅಂತಾ ತಾನೆ ಜನರ ತಿಳಿವಳಿಕೆ ? ಅವರು ಹಾಗೆ ಉದ್ದೇಶಪೂರ್ವಕವಾಗಿ ಪಾರ್ಕ್‌ನಲ್ಲಿ ಕುಳಿತು ಚಳೀಲಿ ನಡುಗಿ ಸತ್ಹೋದ್ರು ಅಂತಾ ತಾನೆ ?

3 ನೆಯ ವರದಿಗಾರ : ಹೌದು.

ಮೇಯರ್ : ಆ ಥರ ಘಟನೆಗಳು ನಡೆಯೋದು ಕೇವಲ ಕಥೇಕಾದಂಬರಿಗಳಲ್ಲಿ ಮಾತ್ರ. ವಾಟನಬಿಯವರ ಸಾವಿಗೆ ಕಾರಣವೇನೂ ಅಂತಾ ನಮಗೆ ಗೊತ್ತಾಗಿದೆ. ಅವರು ಸತ್ತಿದ್ದು ಗ್ಯಾಸ್ಟ್ರಿಕ್ ಕ್ಯಾನ್ಸರ್‌ನಿಂದ.

2 ನೆಯ ವರದಿಗಾರ : ಕ್ಯಾನ್ಸರ್ ?

ಮೇಯರ್ : ಹೌದು, ಆಂತರಿಕ ಸ್ರಾವದಿಂದು ಅವರು ಬಹಳ ಅನಿರೀಕ್ಷಿತವಾಗಿ ಸತ್ತರು, ಮುಂದೇನಾಗುತ್ತೇ ಅಂತಾ ಅವರಿಗೇ ಗೊತ್ತಿರಲಿಲ್ಲ. ನನ್ನ ಮಾತಿನಲ್ಲಿ ನಿಮಗೆ ವಿಶ್ವಾಸವಿಲ್ಲವಾದರೆ, ನೋಡಿ ಇಲ್ಲಿ ಶ್ರೀಮಾನ್ ಒನೊ ಇದಾರೆ... (ಒನೊ ಕಡೆಗೆ ಬೆರಳು ಮಾಡಿ ತೋರಿಸುವನು, ಒನೊ ಈಗ ಮೇಯರ್ ಅವರ ಹಿಂದೆ ನಿಂತಿರುವನು) ಆಟೋಪ್ಸಿ ಮಾಡಿದ ಆಸ್ಪತ್ರೆಯ ವಿಳಾಸವನ್ನು ಅವರಿಗೆ ಕೊಡಿ.

ಈಗ ಮೇಯರ್ ಗಂಭೀರವಾಗಿ ಕೊಠಡಿಯ ಒಳಗೆ ಬಂದು ಕುಳಿತುಕೊಳ್ಳುವ ದೃಶ್ಯ. ವಾಹನವೊಂದು ಹೋಗುತ್ತಿರುವ ಸದ್ದು, ದೂರ ಹೋದಂತೆ ಕ್ರಮೇಣ ಸದ್ದು ಇಲ್ಲವಾಗುವುದು. ಒನೊ ವಾಪಸ್ಸು ಬಂದು ಕುಳಿತುಕೊಳ್ಳುವನು. ಎಲ್ಲ ಕಡೆ ಮೌನ. ಎಲ್ಲರಿಗೂ ಕಸಿವಿಸಿಯೆನಿಸಿದೆ. ಉಪಮೇಯರ್ ಒಂದು ಲೋಟ ಮದ್ಯವನ್ನು ಎತ್ತಿಕೊಳ್ಳುವನು.

ಮೇಯರ್ : ಈ ವರದಿಗಾರರು ನಿಜ ಸಂಗತೀನ ತಿರುಚೋ ರೀತಿ ಇದು (ಆತ ಮದ್ಯವನ್ನು ಕುಡಿಯುವನು, ಅನಂತರ ತನ್ನ ಸುತ್ತ ಕುಳಿತವರ ಕಡೆಗೆ ತಿರುಗುವನು) ನಗರ ಸಭಾ ಯೋಜನೆಗೂ ಮೀರಿದ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳೋ ಶಕ್ತಿ ನಿಜಕ್ಕೂ ಅವರಿಗಿಲ್ಲ. ಈ ಮಾತನ್ನ ಹೇಳೋಕ್ಕೆ ನನಗೆ ಬೇಸರವಾಗುತ್ತೆ. (ಅವನ ಮಾತುಗಳನ್ನು ಒಪ್ಪಿ ಅವರೆಲ್ಲರೂ ತಲೆಬಾಗುವರು. ತಲೆದೂಗುವರು, ನಗುವರು). ಅವರು ವ್ಯವಸ್ಥೆಯನ್ನು ಸ್ವಲ್ಪಕೂಡ ಅರ್ಥ ಮಾಡಿಕೊಂಡಿಲ್ಲ. ಈಗ ಉದಾಹರಣೆಗೆ, ಆ ಪಾರ್ಕ್ ವಿಷಯವನ್ನೇ ತಗೊಳ್ಳಿ. ಶ್ರೀಮಾನ್ ವಾಟನಬಿಯವರೊಬ್ಬರೇ ಅದನ್ನ

ಮಾಡಿಸಿದ್ದು ಅಂತಾ ಜನ ಭಾವಿಸಿದಾರೆ. ಆ ರೀತಿ ಅಂದುಕೊಂಡ್ರೆ, ಅದು ಮೂರ್ಖತನ, ಅಷ್ಟೆ. ವಾಟನಬಿ ಅವರಿಗೆ ತಾವೇ ಸ್ವತಃ ಒಂದು ಪಾರ್ಕ್ ನಿರ್ಮಿಸಬೇಕು ಅನ್ನೋ ಆಲೋಚನೆ ಖಂಡಿತ ಇರ್‍ಲಿಲ್ಲ ಅಂತಾ ನಾನು ಹೇಳ್ತೀನಿ—ಅವರ ಬಂಧುಗಳೆಲ್ಲರ ಎದುರು ನಾನು ಹೀಗೆ ಹೇಳಿದ್ರೆ ಇದು ಧಾರ್ಷ್ಟ್ಯ ಅನ್ನಿಸಬಹುದು. ಒಂದು ವಿಷಯ ನಾನು ಒಪ್ಕೋಬೇಕು—ಅವರು ಕಷ್ಟಪಟ್ಟು ಸಹಾಯ ಮಾಡಿದ್ದೇನೋ ನಿಜ! ಅವರ ಕಾರ್ಯಕ್ಷಮತೆ ನನ್ಗೆ ತುಂಬಾ ಮೆಚ್ಚುಗೆಯಾಯ್ತು. ಆದರೆ ಅದು ಕೂಡ ಅವರ ವಿಭಾಗದ ಕೆಲಸವೇ. (ಅವನ ಮಾತುಗಳನ್ನು ಒಪ್ಪಿ ಆ ವಿಭಾಗದ ಎಲ್ಲ ಗುಮಾಸ್ತರೂ ತಲೆದೂಗುವರು). ಜೊತೆಗೆ, ಯಾರೇ ಆಗ್ಲಿ, ಯಾವಾಗಲೇ ಆಗ್ಲಿ, ವ್ಯವಸ್ಥೆಯ ಬಗ್ಗೆ ಸ್ವಲ್ಪ ಕೂಡ ತಿಳೀದೆ ನಾಗರಿಕ ವಿಭಾಗದ ಮುಖ್ಯಸ್ಥರು ತಾವೇ ಖುದ್ದು ಹೋಗಿ ಪಾರ್ಕ್ ನಿರ್ಮಿಸಿದರೂ ಅಂದ್ರೆ ಅದೊಂದು ಕೇವಲ ಮೂರ್ಖತನ ಅನ್ಸುತ್ತೆ, ಅಷ್ಟೆ. (ಎಲ್ಲರೂ ಒಪ್ಪಿ ತಲೆದೂಗುವರು). ಈ ಅಭಿಪ್ರಾಯ ಕೇಳಿದ್ರೆ ಸತ್ತಿರೋ ಆ ವ್ಯಕ್ತಿಗೆ ಕೂಡ ಅಚ್ಚರಿಯಾಗಬಹುದೇನೋ ಅಂಥಾ ನನ್ನ ನಂಬಿಕೆ. (ಎಲ್ಲರೂ ನಗುವರು). ಆದರೆ ನಾವಾರೂ ಪೂರ್ಣ ನಿರ್ದೋಷಿಗಳೇನಲ್ಲ. ಈಗ ಈ ಪಾರ್ಕು ಇಷ್ಟೊಂದು ಗಮನವನ್ನು ಸೆಳೆದಿರುವುದರಿಂದ ನಾನು ಆ ಸಮಯದಲ್ಲಿ ಏನು ಹೇಳಿದ್ದೆನೋ ಅದನ್ನು ಗಮನದಲ್ಲಿಟ್ಟುಕೊಂಡು ಹೇಳಬೇಕೆಂದರೆ, ಪಾರ್ಕ್ ನಿರ್ಮಾಣದಲ್ಲಿ ನಿಜಕ್ಕೂ ಕಾರಣಕರ್ತರಾಗಿದ್ದವರಿಗೆ ಬಹುಶಃ ನಾವು ಹೆಚ್ಚಿನ ಮನ್ನಣೆಯನ್ನು ನೀಡಬೇಕಾಗಿತ್ತು ಅನ್ಸುತ್ತೆ. ಉದಾಹರಣೆಗೆ ಹೇಳೋದಾದರೆ ನಮ್ಮ ಪಾರ್ಕ್ ವಿಭಾಗದ ಮುಖ್ಯಸ್ಥರು, (ಆ ವ್ಯಕ್ತಿ ಎದ್ದು ಗೌರವಪೂರ್ವಕವಾಗಿ ತಲೆಬಾಗಿ ವಂದಿಸುವನು) ಅವರ ಮೇಲಧಿಕಾರಿಗಳಾದ ಲೋಕೋಪಯೋಗಿ ವಿಭಾಗದ ಮುಖ್ಯಸ್ಥರು. (ಆ ವ್ಯಕ್ತಿ ಎದ್ದು ವಂದಿಸುವನು).

ಲೋಕೋಪಯೋಗಿ ಇಲಾಖೆಯ ಮುಖ್ಯಸ್ಥ : ಸರ್, ನೀವು ಈ ರೀತಿ ಹೇಳಿದ್ದು ತುಂಬ ಒಳ್ಳೆದಾಯ್ತು. ಕಾಗದಪತ್ರಗಳ ವ್ಯವಹಾರಕ್ಕೆ ಸಂಬಂಧಿಸಿದಂತೆ ಹೇಳೋದಾದರೆ ನಾನು ಮತ್ತು ಪಾರ್ಕ್ ವಿಭಾಗದ ಮುಖ್ಯಸ್ಥರು ಈ ಯೋಜನೆ ಕಾರ್ಯಗತವಾಗೋ ರೀತಿ ಮಾಡಿದ್ದು ಅಂತಾ ನನ್ನ ನಂಬಿಕೆ. ಈ ಯೋಜನೆ ಪ್ರತ್ಯಕ್ಷ ಕಾರ್ಯರೂಪಕ್ಕೆ ಬರಲು ಅಪಾರ ಶ್ರಮ ವಹಿಸಿ ದುಡಿದವರ ಗೌರವಿಸೋ ಮಾತು ಬಂದಾಗ, ನನಗೆ ತಿಳಿದಿರೋ ಹಾಗೆ ಈ ಗೌರವಕ್ಕೆ ಪಾತ್ರರಾಗಬೇಕಾದವರು ಉಪಮೇಯರ್ ಅವರು. (ಅವನ ಮಾತುಗಳನ್ನು ಕೇಳಿ, ಒಪ್ಪಿ ಎಲ್ಲರೂ ತಲೆದೂಗುವರು ; ನಗುವರು).

ಮೇಯರ್: ಇಲ್ಲ, ನಾನು ಬರೇ ಟೀಕೆಗೊಳಗಾಗ್ತಿದೇನೆ—ನಾನು ಪಾರ್ಕ್ ಉದ್ಘಾಟನಾ ಸಮಾರಂಭದಲ್ಲಿ ಭಾಷಣ ಮಾಡಿದ್ದನ್ನು ಟೀಕೆ ಮಾಡ್ತಿದ್ದಾರೆ. ಅವರಲ್ಲೊಬ್ಬ ಅದೊಂದು ರಾಜಕೀಯ ಭಾಷಣ ಅಂತಾ ಬೇರೆ ಅಂದ. ಅಲ್ವೆ, ಒನೊ ?

ಆತ ಇನ್ನೂ ಹೆಚ್ಚೇನೋ ಹೇಳಬೇಕೆಂದುಕೊಳ್ಳುವಷ್ಟರಲ್ಲಿ ಪರಿಚಾರಿಕೆಯೊಬ್ಬಳು ಒಳಬಂದು, ಕುರೋಚೋದಿಂದ ಕೆಲವರು ಹೆಂಗಸರು ವಾಟನಬಿಯವರಿಗೆ ಗೌರವ ಸೂಚಿಸಲು ಬಂದಿರುವರೆಂಬ ಸಂಗತಿಯನ್ನು ಮಿತ್ಸುವಿನ ಹೆಂಡತಿಗೆ ತಿಳಿಸುವಳು, ಮಹಿಳೆಯರ ಗುಂಪೊಂದು, ಅವರಲ್ಲಿ ಅನೇಕ ಜನ ಹಿಂದಾಗಲೇ ನಾಗರಿಕ ವಿಭಾಗಕ್ಕೆ ಬಂದಿದ್ದವರು, ಈಗ ಕೋಣೆಯೊಳಗೆ ಪ್ರವೇಶ ಮಾಡುವುದು. ಅವರಾರೂ ಆಹ್ವಾನಕ್ಕಾಗಿ ಕಾಯುವುದಿಲ್ಲ; ನೇರವಾಗಿ ಸಮಾಧಿಪೀಠದ ಹತ್ತಿರ ಹೋಗುವರು. ಬಹಳಷ್ಟು ಜನ ಹೆಂಗಸರು ಅಳುತ್ತಿರುವರು. ಅವರೆಲ್ಲ ವಾಟನಬಿಯ ಭಾವಚಿತ್ರದ ಮುಂದೆ ತಲೆಬಾಗಿ ನಮಿಸುವರು; ಗಂಧದ ಕಡ್ಡಿ ಹೊತ್ತಿಸುವರು. ಆ ಗುಂಪಿನಲ್ಲಿ ಒಬ್ಬ ಹೆಂಗಸಿನ ಭುಜದ ಮೇಲಿದ್ದ ಮಗುವೊಂದು ಅಳತೊಡಗುವುದು.

ಈಗ ಮಿತ್ಸು ಅವರನ್ನೆಲ್ಲ ನೋಡುತ್ತಿರುವ ದೃಶ್ಯ. ಈಗ ಮಿತ್ಸುವಿನ ಹೆಂಡತಿಯ ದೃಶ್ಯ. ಕೋಣೆಯ ನಡುವೆ ಹಾಗೇ ಸುಮ್ಮನೆ ನಿಂತಿರುವುದು ಸರಿಯಲ್ಲವೆಂದು ಆಕೆಗನಿಸುವುದು. ಹಾಗಾಗಿ ಅವಳು ಮಂಡಿಯೂರಿ ಕುಳಿತುಕೊಳ್ಳುವಳು.

ಈಗ ಇಡೀ ಕೋಣೆಯ ದೃಶ್ಯ. ಅಧಿಕಾರಿಗಳಿಗೆ ಕಸಿವಿಸಿಯಾಗಿ ಹುಬ್ಬು ಗಂಟಿಕ್ಕುವರು. ಅವರಲ್ಲಿ 'ಕಿಮುರ' ಒಬ್ಬನಿಗೆ ಮಾತ್ರ ಮನಸ್ಸಿಗೆ 'ಚುರ್' ಅನ್ನುವುದು. ಆತ ಕಣ್ಣೀರನ್ನು ಮರೆ ಮಾಡುವವನಂತೆ ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಳ್ಳುವನು. ಅನಂತರ ಹೊರಗೆ ಹೋಗಲು ಹೆಂಗಸರೆಲ್ಲ ಮೇಲೇಳುವರು. ಅವರು ಹೊರಗೆ ಹೋಗುತ್ತಿರುವಂತೆಯೇ ಅಲ್ಲಿರುವ ಇತರ ಅತಿಥಿಗಳಿಗೆ ಬಾಗಿ ವಂದಿಸುವರು. ಅವರಿಗೆ ಕಿಮುರ ಒಬ್ಬನೇ ಒಬ್ಬ ಮಾತ್ರ ಪ್ರತಿಯಾಗಿ ವಂದಿಸುವನು. ದೀರ್ಘ ಮೌನ.

ಈಗ ವಾಟನಬಿಯ ಭಾವಚಿತ್ರದ ದೃಶ್ಯ; ಆ ಚಿತ್ರದ ಸನಿಹ ನೋಟ; ತೀರ ಸನಿಹ ನೋಟ—ಭಾವಚಿತ್ರದ ಕಣಕಣವೂ ಎದ್ದು ಕಾಣುತ್ತಿದೆ.

ಈಗ ಇಡೀ ಕೋಣೆಯ ದೃಶ್ಯ; ಹೆಂಗಸರು ಹೊರಗೆ ಹೋಗಿದ್ದು ಕಂಡು ಮಿತ್ಸುವಿನ ಹೆಂಡತಿ ವಾಪಸು ಬಂದು ಕುಳಿತುಕೊಳ್ಳುವಳು. ಅದೇ ಮೌನ, ಮುರಿಯದೆ ಮುಂದುವರಿಯುವುದು.

ಅನಂತರ ಲೋಕೋಪಯೋಗಿ ಇಲಾಖೆಯ ಮುಖ್ಯಸ್ಥ ಮತ್ತು ಪಾರ್ಕ್ ವಿಭಾಗದ ಮುಖ್ಯಸ್ಥನನ್ನು ನೋಡಿ ಉಪಮೇಯರ್ ತಲೆ ಅಲ್ಲಾಡಿಸುವನು. ಅವರು

ಮುಂಡಿಯೂರಿ ಸಮಾಧಿ ಪೀಠಕ್ಕೂ, ಭಾವಚಿತ್ರಕ್ಕೂ, ವಾಟನಬಿಯ ಕುಟುಂಬಕ್ಕೂ ವಂದಿಸಿ ವಿನಯಪೂರ್ವಕವಾಗಿ ಹೊರಗೆ ಹೋಗುವರು. ಅವರನ್ನು ಬೀಳ್ಕೊಡಲು ಹೊರಗೆ ಹೋಗಿದ್ದ ಒನೊ ಒಳಗೆ ಬರುವನು.

ಒನೊ : ಚಳಿಯಾಗ್ತಿದೆ, ಅಲ್ವೇನು ?

ಕೀಚೀ : ಸ್ವಲ್ಪ ಮದ್ಯ ತಗೋಳಿ (ಆತ ಮದ್ಯದ ಶೀಷೆ ತೆಗೆದುಕೊಳ್ಳುವನು). ಒಹ್, ಕ್ಷಮಿಸಿ, ಇದು ತಂಪು ಮದ್ಯ, ನಾನು ಹೋಗಿ ಸ್ವಲ್ಪ ಬಿಸಿ ಮದ್ಯ ತರ್ತೀನಿ. ನಾವೆಲ್ಲರೂ ಒಟ್ಟಿಗೆ, ಇನ್ನೂ ಸ್ವಲ್ಪ ಹತ್ತತ್ರ ಕುಳಿತರೆ ಹೇಗೆ ?

ಎಲ್ಲರೂ ಜರುಗತೊಡಗುವರು, ಜಾಗಕ್ಕಾಗಿ ಒಂದು ರೀತಿಯ ಪೈಪೋಟಿಯೇ ನಡೆಯುವುದು. ಆಗತಾನೆ ಖಾಲಿಯಾಗಿದ್ದ, ಮೇಯರ್ ಕುಳಿತ ಕುರ್ಚಿಯನ್ನು ಹಿಡಿಯುವಲ್ಲಿ ಒನೊ ಯಶಸ್ವಿಯಾಗುವನು. ಕುಳಿತವರು ತಮಗೆ ದಕ್ಕಿದಷ್ಟರಲ್ಲಿ ತೃಪ್ತಿಪಟ್ಟುಕೊಳ್ಳಬೇಕಾಗುವುದು. ಮುದುಕ ಒಹಾರ ತುಂಬಾ ತಡವಾಗಿ ಮೇಲಕ್ಕೆ ಏಳುವನು, ಜಾಗಕ್ಕಾಗಿ ಆಚೆ ಪಕ್ಕದಲ್ಲಿ ನೋಡುವನು. ಎಲ್ಲ ಕುರ್ಚಿಗಳೂ ಭರ್ತಿಯಾಗಿವೆ. ಆತ ಗೊಣಗುಟ್ಟುತ್ತ ನೆಲದಮೇಲೆಯೇ ಕುಳಿತುಕೊಳ್ಳುವನು. ಅವರೆಲ್ಲ ಸಭೆಗೆ ಹೋಗಿರುವರೇನು ? ಎಂದು ಯಾರೋ ಒಬ್ಬ ಕೇಳುವನು.

ಕಿಮುರ : ಹೌದು, ಅವರಿಗೆ ಇಲ್ಲಿನ ವಾತಾವರಣವನ್ನು ಸಹಿಸೋಕೆ ಸಾಧ್ಯವಾಗಲಿಲ್ಲ. ಯಾರು ಏನೇ ಹೇಳಲಿ, ವಾಟನಬಿಯವರೇ, ಆ ಪಾರ್ಕನ್ನು ನಿರ್ಮಿಸಿದ್ದು. ಮತ್ತೆ, ಆ ವಿಷಯ ಮೇಯರಿಗೆ ಕೂಡ ಗೊತ್ತು. ಅದಕ್ಕೇ ಅವರು...

ಒನೊ : ನೀವು ಎಲ್ಲೆ ಮೀರಿ ಹೋಗ್ತಿದೀರಿ. ಶ್ರೀಮಾನ್ ವಾಟನಬಿಯವರು ಕೇವಲ...

ಗುಮಾಸ್ತ : ನಾನು ಪಾರ್ಕ್ ವಿಭಾಗದಲ್ಲಿ ಇದೀನಿ ಅನ್ನೋ ಕಾರಣಕ್ಕಾಗಿ ಹೇಳ್ತಿಲ್ಲ. ನನಗೆ ಗೊತ್ತಿರೋ ಹಾಗೆ ಯೋಜನೆ ತಯಾರಿಸಿದ್ದು, ಇಡೀ ಕೆಲಸವನ್ನು ನಿರ್ವಹಿಸಿದ್ದು ನಮ್ಮ ವಿಭಾಗ.

ಕಿಮುರ : ಅದಲ್ಲ ನನ್ನ ಮಾತಿನ ಅರ್ಥ.

ಸಯಿಟೋ : ಅದೆಲ್ಲ ಆಯ್ತು ಬಿಡಿ. ನಿಮ್ಮ ಅಭಿಪ್ರಾಯ ಏನೂ ಅಂತ ನಮಗ್ಗೊತ್ತು. ಆದರೆ ಪಾರ್ಕ್ ನಿರ್ಮಿಸೋದಿಕ್ಕೆ ನಾಗರಿಕ ವಿಭಾಗದ ಮುಖ್ಯಸ್ಥರು ಯಾಕಾಗಿ ಪ್ರಯತ್ನಪಟ್ಟರು ? ಅದು ಅವರ ಅಧಿಕಾರವಲಯದ ಆಚೆಗಿನ ಕೆಲಸ.

ನೊಗೂಚಿ : ಅದೇನೆ ಇರ್ಲಿ. ಒಬ್ರೇ ಯಾರೂ ಆ ಪಾರ್ಕ್ ನಿರ್ಮಿಸಲಿಲ್ಲ. ಅದೊಂದು ವಿಚಿತ್ರ ಘಟನೆ. ಮುಂದೆ ಚುನಾವಣೆಗಳು ಬರ್ತೀವೆ ಅನ್ನೋ ಕಾರಣ ಇಲ್ದೇ ಹೋಗಿದ್ದಿದ್ದರೆ, ಯಾವ ಕೌನ್ಸಿಲರೂ ಈ ಬಗ್ಗೆ ಏನೂ ಕ್ರಮ ಕೈಗೊಳ್ತಿರಲಿಲ್ಲ (ಕಿಮುರ ಏನನ್ನೋ ಹೇಳಬೇಕೆಂದು ಪ್ರಯತ್ನಿಸುವಷ್ಟರಲ್ಲಿ

ನೊಗುಚಿ ಮಾತು ಮುಂದುವರಿಸುವನು) ಈಗ ನೀವೇ ಆಲೋಚಿಸಿ ; ಅದೇ ಆ ಗ್ಯಾಂಗಿನವರು ಆ ಪ್ರದೇಶದಲ್ಲಿ ಕೆಂಪುದೀಪ ಜಿಲ್ಲೆಯ ನಿರ್ಮಾಣ ಮಾಡ್ಬೇಕು ಅಂತಾ ಆಲೋಚನೆ ಮಾಡಿದ್ದರೆ ಅನ್ನೋ ಸುದ್ದಿ ಇಲ್ದೇ ಇದ್ದಿದ್ರೆ ಈ ಯೋಜನೆ ಇಷ್ಟೊಂದು ನಿರಾಯಾಸವಾಗಿ ಕೂಡ ಮುಗೀತಿರ್ಲಿಲ್ಲ.

ಒಹಾರ : ನನಗಿದೆಲ್ಲ ಏನೂ ಅಂತಾನೇ ಅರ್ಥವಾಗ್ತಿಲ್ಲ. (ತನ್ನ ಪಾಡಿಗೆ ತಾನು ಮಾತನಾಡಿಕೊಳ್ಳುತ್ತಿರುವನೋ ಎಂಬಂತೆ ತಲೆ ಕೊಡುವವನು) ವಾಟನಬಿಯವರು ಈ ರೀತಿ ಯಾಕೆ ಬದಲಾದರು ? ಅವರು ಧಿಡೀರನೆ ಬದಲಾಯಿಸಿಬಿಟ್ರು.

ಒನೊ : ಹೌದು, ಹಾಗೆ ಅವರು ಬದಲಾಗಿದ್ದು ಪರಮಾಶ್ಚರ್ಯ!

ಸಯಿಟೊ : ಅಲ್ಲೇ ಇರೋದು ಸ್ವಾರಸ್ಯ! ಆ ಬಗ್ಗೆ ನನಗೆ ಈಗ ಹೀಗನ್ಸುತ್ತೆ... ತಮಗೆ ಕ್ಯಾನ್ಸರ್ ಇರೋ ವಿಷಯ ವಾಟನಬಿಯವರಿಗೆ ತಿಳ್ದಿರಬೇಕು. ಅದಕ್ಕೇ ಅವರು ಆ ರೀತಿ ಬದಲಾಗಿದ್ದು.

ಈಗ ಅದೇ ತಾನೆ ಹೆಚ್ಚು ಮದ್ಯವನ್ನು ತೆಗದುಕೊಂಡು ಬಂದಿರುವ ಮಿತ್ಸುವಿನ ಕಡೆಗೆ ಒನೊ ತಿರುಗಿಕೊಳ್ಳುವ ದೃಶ್ಯ.

ಒನೊ : ಇದೀಗ ನಿಮ್ಮ ತಂದೆ ವಿಷಯಾನೇ ಮಾತ್ನಾಡ್ತಿದ್ವಿ. ತಮಗೆ ಗ್ಯಾಸ್ಟ್ರಿಕ್ ಕ್ಯಾನ್ಸರ್ ಇದ್ದ ವಿಷಯ ಅವರಿಗೆ ಗೊತ್ತಿತ್ತ ?

ಮಿತ್ಸು : ಹಾಗೊಂದು ಪಕ್ಷ ಗೊತ್ತಿದ್ದಿದ್ರೆ, ನನಗವರು ಖಂಡಿತ ತಿಳಿಸ್ತಿದ್ರು. ಕ್ಯಾನ್ಸರ್ ಇರೋ ವಿಷಯ ನಮ್ಮ ತಂದೆಯವರಿಗೆ ಸ್ವಲ್ಪ ಕೂಡ ತಿಳೀದೆ ಇದ್ದುದ್ದೇ ಒಳ್ಳೇದಾಯ್ತು ಅಂತಾ ನನಗನ್ಸುತ್ತೆ. ಅಲ್ಲದೆ, ಈ ರೀತಿ ಇದೆ ಅಂತಾ ತಿಳಿಯೋದು ಅಂದ್ರೆ ಮರಣ ದಂಡನೆಗೆ ಗುರಿಯಾದಂತೆಯೇ.

ಕೀಚೀ ಹಿಂದಿರುಗಿ ಕೋಣೆಯೊಳಗೆ ಬರುವನು.

ಒನೊ : ಹಾಗಾದ್ರೆ ಸಯಿಟೊ ಸಿದ್ಧಾಂತ ತಪ್ಪು.

ಕೀಚೀ : ಏನ್ ವಿಷಯ ?

ಒನೊ : ಶ್ರೀಮಾನ್ ವಾಟನಬಿಯವರು ಕಡೆಯ ಐದು ತಿಂಗಳ ಅವಧಿಯಲ್ಲಿ ತುಂಬಾ ಬದಲಾದರು ; ಆದರೆ ಅವರು ಯಾಕೆ ಹಾಗಾದ್ರೂ ಅಂತಾ ನಮಗೆ ಅರ್ಥವಾಗ್ತಿಲ್ಲ.

ಕೀಚೀ : ಒಹ್, ಆ ವಿಷಯಾವೆ ?! ಒಂದು ಹೆಣ್ಣಿನಿಂದ ಹಾಗಾಗಿದ್ದು. ನಿಮಗೆ ಗೊತ್ತೇನು ? ಸಾಮಾನ್ಯವಾಗಿ ವಯಸ್ಸಾದ ವ್ಯಕ್ತಿ ಒಂದು ಹೆಣ್ಣನ್ನು

ಇಟ್ಟುಕೊಂಡು ತನ್ನ ಯೌವನವನ್ನು ಉಳಿಸಿಕೊಳ್ಳೋಕೆ ಇಷ್ಟಪಡ್ತಾನೆ. ಇದರಿಂದ ಅವನ ಮೈ ರಂಗೇರುತ್ತೆ, ಅವನ ಕಣ್ಣುಗಳು ಹೊಳಪಾಗ್ತವೆ. (ಅವನ ಹೆಂಡತಿ ಅವನ ಕಡೆ ನೋಡುತ್ತಿರುವಳು) ಆದೇನೇ ಇರ್ಲಿ, ಅವರು ಯಾರ್‍ನೋ ಇಟ್ಟುಕೊಂಡಿದ್ದಿರಬೇಕು ಅಂತಾ ನನಗನ್ನಸ್ತೆ.

ಒನೊ : ಅಂದಹಾಗೆ, ಅವರು ಒಳ್ಳೇ ಸುಂದರವಾದ ಹ್ಯಾಟ್ ಹಾಕಿಕೊಳ್ಳೋದಿಕ್ಕೆ ಬೇರೆ ಪ್ರಾರಂಭಿಸಿದ್ರು.

ಈ ಮಾತು ಕೇಳಿ ಕೆಲವರು ನಗುವರು, ತಲೆದೂಗುವರು. ಸಯಿಟೊ ಹಿಂದಿರುಗಿ, ಸಮಾಧಿಪೀಠದ ಮೇಲಿರುವ ವಾಟನಬಿಯ ಭಾವಚಿತ್ರವನ್ನು ನೋಡುವನು.

ಸಯಿಟೊ : ಅದೇ ಆ ಹ್ಯಾಟ್, ಅದು ನಿಜಕ್ಕೂ ನನ್ನನ್ನ ಚಕಿತಗೊಳಿಸಿಬಿಡ್ತು.

ಫ್ಲಾಶ್‌ಬ್ಯಾಕ್ ; ಈಗ, ವಾಟನಬಿಯು ವರದಿಯೊಂದನ್ನು ಒನೊ ಕೈಗೆ ಕೊಟ್ಟು ತೀರ್ಮಾನದ ಮಾತುಗಳನ್ನು ಹೇಳುತ್ತಿರುವ ಹಿಂದಿನ ಅದೇ ದೃಶ್ಯ. ಸಂಭಾಷಣೆ ಕೂಡ ಮೊದಲಿದ್ದಂತೆಯೇ.

ಒನೊ : ಆದ್ರೆ, ಇದು ಬಹಳ ಕಷ್ಟವಾಗುತ್ತೆ.

ವಾಟನಬಿ : ಇಲ್ಲ, ನಾವು ಮನಸ್ಸು ಮಾಡಿದ್ರೆ, ಕಷ್ಟವೂ ಆಗೊಲ್ಲ, ಎಂಥದೂ ಆಗಲ್ಲ.

ವಾಟನಬಿ ತನ್ನ ಕೋಟನ್ನು ಆತುರಾತುರವಾಗಿ ಹಾಕಿಕೊಳ್ಳುತ್ತಿರುವಂತೆಯೇ ಕ್ಯಾಮರಾ ಕೂಡ ಅದೇ ವೇಗದಲ್ಲಿ ಚಲಿಸುವುದು. ಮಧ್ಯಾಹ್ನದ ಫ್ಯಾಕ್ಟರಿಯ ಕೂಗು ಕೇಳಿಸುವುದು.

ಒನೊ : ಆದ್ರೆ......

ಈಗ ಕುರೋ–ಚೋದಲ್ಲಿನ ಖಾಲಿ ಪ್ರದೇಶದ ದೃಶ್ಯ ; ಮಳೆ ಸುರಿಯುತ್ತಿದೆ. ವಾಟನಬಿ ಮಳೆಯಲ್ಲಿ ನೆನೆಯುತ್ತ, ಕೆಸರಿನಲ್ಲಿ ಸುತ್ತಾಡುತ್ತ ಆಟದ ಮೈದಾನವಿರುವ ಜಾಗ ಎಲ್ಲಿದೆ ಎಂದು ನೋಡುತ್ತಿರುವನು. ಯಾರೋ ಹೆಂಗಸೊಬ್ಬಳು ಒಂದು ಛತ್ರಿ ತೆಗೆದುಕೊಡು ಓಡಿ ಬಂದು, ಅವನ ತಲೆಯ ಮೇಲೆ ಹಿಡಿಯುವಳು.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ.

ಸಯಿಟೊ : ಬಹಳ ಕಷ್ಟದ ಪ್ರಯತ್ನ ಮಾಡ್ತಿರೋ ಹಾಗೆ ಕಾಣ್ತಿದ್ದರು. ಅದು ಅಷ್ಟೊಂದು ಸುಲಭವಾಗಿರಲಿಲ್ಲ.

ಒನೊ : ಹೌದು, ಅದೂ ನಿಜ. ಆದ್ರೂ ನೋಡಿ, ನನ್ಗೆ ನಂಬೋಕೆ ಆಗ್ತಿಲ್ಲ. ಕೇವಲ ಹೆಣ್ಣೊಬ್ಬಳ ಪ್ರಭಾವ ಈ ರೀತಿ...

ಕೀಚೀ : ಆದ್ರೆ...

ಮಿತ್ಸು : ಸುಮ್ನಿರು.

ಒಹಾರ : ನನ್ಗೆ ಇದು ಏನೂ ಅಂಥಾನೇ ಅರ್ಥವಾಗ್ತಿಲ್ಲ.

ಪಾರ್ಕ್ ವಿಭಾಗದ ಗುಮಾಸ್ತ : ಮತ್ತೆ, ವಾಟನಬಿಯವರ ಪ್ರಯತ್ನಗಳೇ ಕೆಲವು ವಿಷಯಗಳನ್ನು ಜಟಿಲಗೊಳಿಸುತ್ತಿದ್ದ ದಿನಗಳೂ ಇದ್ದುವು.

ಒಳಚರಂಡಿ ವಿಭಾಗದ ಗುಮಾಸ್ತ : ನೀನೇಳೊದು ಸರಿ. ಆದರೆ ನನಗೆ ಅರ್ಥವಾಗದೇ ಇರೋದು ಏನಪ್ಪಾ ಅಂದ್ರೆ, ಕಳೆದ ಮೂವತ್ತು ವರ್ಷಗಳಿಂದ ಅಧಿಕಾರಿಯಾಗಿದ್ದ ಒಬ್ಬ ವ್ಯಕ್ತಿ ಯಾಕೆ ಹೀಗೆ...

ಕಿಮುರ : ಯಾಕೆ ಹೀಗೆ ಅಂದ್ರೆ...

ಪಾರ್ಕ್ ವಿಭಾಗದ ಗುಮಾಸ್ತ : ಅಲ್ಲದೆ, ಅವರು ಆ ರೀತಿ ಹೋಗಿ ಇತರ ಎಲ್ಲ ವಿಭಾಗಗಳ ಜೊತೇಲೂ ಮಾತ್ನಾಡೋದಿಕ್ಕೆ ಪ್ರಯತ್ನಿಸಬೇಕಾಗಿರ್ಲಿಲ್ಲ. ಅವರು ಹೀಗೆ ಮಾಡಿದ್ದನ್ನು ಯಾರೂ ಇಷ್ಟಪಡ್ಲಿಲ್ಲ ಅನ್ನೋದು ಕೂಡ ತುಂಬಾ ಸಹಜ–ಮುಖ್ಯವಾಗಿ ನನ್ನ ಮೇಲಧಿಕಾರಿಯವರಿಗೆ ಇದು ಸರಿ ಕಾಣ್ಲಿಲ್ಲ. ಪಾರ್ಕ್ಸ್ ವಿಷಯಕ್ಕೆ ಸಂಬಂಧಪಟ್ಟ ಜವಾಬ್ದಾರಿಯೆಲ್ಲ ತನ್ನದೇ ಅಂತಾ ಅವರ ಭಾವನೆ.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ಪಾರ್ಕ್ ವಿಭಾಗದ ದೃಶ್ಯ; ವಾಟನಬಿ ಮನವಿಯೊಂದನ್ನು ಸಲ್ಲಿಸುತ್ತಿರುವನು. ಪಾರ್ಕ್ ವಿಭಾಗದ ಮುಖ್ಯಸ್ಥ ಬೇಸರದಿಂದ ತಿರುಗಿ ನೋಡುವನು.

ಮುಖ್ಯಸ್ಥ : ನೋಡಿ, ಈಗಾಗ್ಲೆ ನಮ್ಮಲ್ಲಿ ಅನೇಕ ಪಾರ್ಕ್ ಯೋಜನೆಗಳಿವೆ.

ವಾಟನಬಿ : ದಯವಿಟ್ಟು ಹಾಗೆ ಹೇಳಬೇಡಿ. ಆ ಸ್ಥಳದ ಪರಿಸ್ಥಿತಿ ತುಂಬಾ ಗಂಭೀರವಾಗಿದೆ.

ಮುಖ್ಯಸ್ಥ : ನಿಮ್ಮ ಯೋಜನೆ, ಇಲ್ಲಿ ರೂಪಿಸಿರೋ ಥರದಲ್ಲಿ, ಕೆಲಸವಾಗೋದು ನೀವು ತಿಳಿದಿರೋವಷ್ಟು ಸುಲಭವಲ್ಲ ಅಂತಾ ಕಾಣುತ್ತೆ.

ಅದೇ ಸ್ಥಳದ ದೃಶ್ಯ; ಆದರೆ ಈಗ ಸ್ವಲ್ಪ ಸಮಯ ಕಳೆದಿದೆ. ವಾಟನಬಿ ಒಂದು ಕಡೆ ಕುಳಿತಿರುವನು; ಪಾರ್ಕ್ ವಿಭಾಗದ ಮುಖ್ಯಸ್ಥ ಕೆಲಸ ಮಾಡಲು ಪ್ರಯತ್ನಿಸುವನು; ಆದರೆ ಸಾಧ್ಯವಾಗುವುದಿಲ್ಲ. ತಲೆತಗ್ಗಿಸಿಕೊಂಡು ಕುಳಿತಿರುವ ವಾಟನಬಿಯನ್ನು

ಆತ ಆಗಾಗ ಗಮನಿಸುತ್ತಿರುವನು. ಕಡೆಗೆ ಮುಖ್ಯಸ್ಥ ಆ ಮನವಿಯನ್ನು ಕೈಗೆತ್ತಿಕೊಳ್ಳುವನು. ಹಿಂದೆಮುಂದೆ ಆಲೋಚಿಸದೆ ಆ ಮನವಿಯ ಮೇಲೆ ಮುದ್ರೆಯೊತ್ತುವನು. ಅನಂತರ ಅದನ್ನು 'ರವಾನೆ' ಬುಟ್ಟಿಯಲ್ಲಿ ಹಾಕುವನು. ಅನಂತರ ಹಿಂತಿರುಗಿ ವಾಟನಬಿಯನ್ನು ನೋಡುವನು. ಆತ ಸ್ವಲ್ಪ ಕೂಡ ಕದಲುವುದಿಲ್ಲ.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ.

ಸಯಿಟೊ: ಮುಖ್ಯಾಧಿಕಾರಿ ಒಪ್ಪಿಗೆ ಕೊಡೋವರ್ರೂಗ್ಗ ವಾಟನಬಿ ಅವರ ಕುತ್ತಿಗೆ ಮ್ಯೇಲೆ ಕುಳಿತುಬಿಟ್ಟರು.

ಲೋಕೋಪಯೋಗಿ ಇಲಾಖೆ ಗುಮಾಸ್ತ: ಈ ರೀತಿ ಅಂತಾ ನೀನೀಗ ಹೇಳ್ದಲ್ಲ, ನಮ್ಮ ಬಾಸ್ ಕಥೇನೂ ಅದೇನೆ. ಆ ವಾಟನಬಿಯವರು ನಮ್ಮ ಬಾಸ್ ಕಛೇರಿ ಒಳಗೇ ಬರೋಕೂ ಬಿಡ್ತಿರ್ಲಿಲ್ಲ. ಅವರು ಬರೋದು ಕಂಡ್ರೆ ಸಾಕು ನಮ್ಮ ಬಾಸ್ ಹಾಗೇ ವಾಪಸು ಓಡಿಹೋಗಿಬಿಡ್ತಿದ್ರು.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ನಗರಸಭೆಯ ಕಾರಿಡಾರ್‌ನ ದೃಶ್ಯ. ವಾಟನಬಿ ಬರುತ್ತಿರುವುದನ್ನು ಲೋಕೋಪಯೋಗಿ ಇಲಾಖೆಯ ಮುಖ್ಯಸ್ಥ ಗಮನಿಸುವನು. ಆತ ಕೂಡಲೆ ಆತುರಾತುರವಾಗಿ ವಾಪಸು ಹೋಗುವಷ್ಟರಲ್ಲಿ ಕಾಲ ಮಿಂಚಿರುವುದು. ವಾಟನಬಿ ಆ ಅಧಿಕಾರಿಯನ್ನು ಕಂಡವನೇ ಅವನ ಬೆನ್ನಟ್ಟುವನು.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ—ಬಹಳ ಮಂದಿ ಕುಡಿದು ಮತ್ತೇರಿರುವ ರೀತಿ ಕಾಣುತ್ತಿರುವರು.

ನೈರ್ಮಲ್ಯ ವಿಭಾಗದ ಗುಮಾಸ್ತ: ನನಗೆ ಬಹಳ ಆಶ್ಚರ್ಯವುಂಟು ಮಾಡಿದ ವಿಷಯ ಏನಪ್ಪ ಅಂದ್ರೆ, ಅಂಥ ದೊಡ್ಡ ಅಧಿಕಾರಿ ನಮ್ಮಂಥ ಗುಮಾಸ್ತರ ಕೂಡ ವರ್ತಿಸುತ್ತಿದ್ದ ರೀತಿ.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ನೈರ್ಮಲ್ಯ ವಿಭಾಗದ ದೃಶ್ಯ; ವಾಟನಬಿ ಆ ಕಛೇರಿಯ ಪ್ರತಿಯೊಬ್ಬ ವ್ಯಕ್ತಿಯ ಬಳಿಯೂ ಹೋಗಿ ಬಾಗಿ ನಮಸ್ಕರಿಸುತ್ತಿರುವನು. ಪ್ರತಿಯೊಬ್ಬರೂ ಎದ್ದು ನಿಂತು ಪ್ರತಿವಂದಿಸುತ್ತಿರುವರು. ವಾಟನಬಿ ಪ್ರತಿಭಾರಿ ನಮಸ್ಕರಿಸುವಾಗಲೂ 'ದಯವಿಟ್ಟು' ಎಂದು ಮೆಲ್ಲಗೆ ಉಸುರುತ್ತಿರುವನು; ಪ್ರತಿಭಾರಿ ಪ್ರತಿವಂದಿಸುವಾಗಲೂ ಗುಮಾಸ್ತರು ಸಂಕೋಚದಿಂದ ಕುಗ್ಗಿಹೋಗಿರುವರು.

ನೈರ್ಮಲ್ಯ ವಿಭಾಗದ ಗುಮಾಸ್ತ: (ಅದೃಶ್ಯ). ಕೊನೆಗೆ ನಾವು ಕೂಡ ಒಪ್ಪಿಗೆ ನೀಡಿದೊ.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ.

ಲೋಕೋಪಯೋಗಿ ಇಲಾಖೆಯ ಗುಮಾಸ್ತ : ಅವರಿಗಾಗಿ ನಾವೆಲ್ಲ ವ್ಯಥೆಪಟ್ಟೆವು.

ಸೊಗುಚಿ : ಆದರೆ, ಅವರಿಗೆ ಬಹಳ ತೊಂದರೆ ಕೊಟ್ಟವರು ಅಂದ್ರೆ ನೀವು, ಸಾರ್ವಜನಿಕ ವ್ಯವಹಾರ ವಿಭಾಗದ ಜನ.

ಸಾರ್ವಜನಿಕ ವ್ಯವಹಾರ ವಿಭಾಗದ ಗುಮಾಸ್ತ : ಓಹ್, ನೀವೂ ಹಾಗೆ ಭಾವಿಸ್ತೀರ ?

ಒನೊ : ಭಾವಿಸೋದೇನು ಬಂತು, ಅದೇ ನಿಜ. ನಾನು ಅವರ ಜೊತೆ ಹೆಚ್ಚುಕಮ್ಮಿ ಎರಡು ವಾರ ಕಾಲ ಸುತ್ತಾಡಿದೀನಿ. ಅದನ್ನ ನಾನು ಎಂದೂ ಮರೆಯೊಲ್ಲ.

ಸಾರ್ವಜನಿಕ ವ್ಯವಹಾರ ವಿಭಾಗದ ಗುಮಾಸ್ತ : ಸರ್, ದಯವಿಟ್ಟು ಕ್ಷಮಿಸಿ.

ಸಯಿಟೊ : ಆದರೆ ನನಗೆ ಬಹಳ ಆಶ್ಚರ್ಯವುಂಟುಮಾಡಿದ್ದು ಅಂದ್ರೆ ಆ ಘಟನೆ...

ಸಕಾಯಿ : ಓಹ್, ಅದಾ. ಅದು ನಿಜಕ್ಕೂ ಆಶ್ಚರ್ಯಕರವಾಗಿತ್ತು.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ನಾಗರಿಕ ವಿಭಾಗಕ್ಕೆ ಹೋಗುವ ಮಹಡಿಮೆಟ್ಟಲು ದಾರಿಯ ದೃಶ್ಯ. ಕುರೋ–ಚೋದಿಂದ ಬಂದಿರುವ ಮಹಿಳೆಯರ ಗುಂಪಿನ ಮುಂದಾಳಾಗಿ ವಾಟನಬಿ ನಡೆಯುತ್ತಿರುವನು. ಅವನು ನೇರವಾಗಿ ಮಹಡಿಯ ಮೇಲೆ ಹೋಗುವನು. ಅವನ ಕಛೇರಿಯ ಗುಮಾಸ್ತರು ಅವನನ್ನು ನೆಟ್ಟ ನೋಟದಿಂದ ನೋಡುವರು. ಕಾರಿಡಾರಿನ ತುದಿಯಲ್ಲಿ, ಆತ ತನ್ನ ಕೋಟ್ ಕಳಚಿ, ಆ ಗುಂಪಿನಲ್ಲಿರುವ ಹೆಂಗಸೊಬ್ಬಳ ಕೈಗೆ ಕೊಟ್ಟು "ಉಪಮೇಯರ್ ಅವರ ಕಛೇರಿ" ಎಂಬ ಬೋರ್ಡ್ ಇರುವ ಬಾಗಿಲ ಒಳಗೆ ಹೋಗುವನು.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ.

ಒನೊ : ಹೋದುದ್ದು ಅಷ್ಟೇ ಅಲ್ಲ.

ಸಯಿಟೊ : ಮೇಯರ್ ಅವರ ಕಛೇರಿಯಲ್ಲಿ ಏನು ನಡೀತು ?

ಒನೊ : ಮೇಯರ್ ಅವರ ಎದುರು ವಾಟನಬಿಯವರ ಥರ ಯಾರೂ ನಿಂತಿರಲಾರರು ಅಂತಾ ನನಗೆ ಅನುಮಾನ.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ಉಪಮೇಯರ್ ಅವರ ಕಛೇರಿ ದೃಶ್ಯ ; ವಾಟನಬಿ ಬಾಗಿ ನಮಸ್ಕರಿಸುತ್ತಿರುವನು. ಒನೊ ಅವನ ಹಿಂದೆ ನಿಂತಿರುವನು.

ಮೇಯರ್ : ಇಂಥ ಈ ನಿಮ್ಮ ಪಾರ್ಕ್ ಯೋಜನೆಯನ್ನು ಪಾಸ್ ಮಾಡಲು ವೈಯಕ್ತಿವಾಗಿ ನನ್ನದೇನೂ ಅಭ್ಯಂತರವಿಲ್ಲ. ಆದರೆ ಕೆಲವು ಜನ ನೀವು ಪ್ರಚಾರಕ್ಕೆ ಆಸೆಪಡ್ತಿದೀರಿ ಅಂತಾ ಭಾವಿಸಬಹುದು. ನಗರಸಭೆಗೆ ಅನೇಕ ಸಮಸ್ಯೆಗಳಿವೆ. ನೀವು ಈ ಯೋಜನೆ ವಿಷಯ ಮರೆತುಬಿಡೋದೆ ಉತ್ತಮ ಅನ್ಸುತ್ತೆ.

ಆತ ಈ ಮಾತುಗಳನ್ನು ಹೇಳಿ, ನಂತರ ತನ್ನ ಸ್ನೇಹಿತರ ಕಡೆಗೆ ತಿರುಗಿ, ನಿಲ್ಲಿಸಿದ ಸಂಭಾಷಣೆಯನ್ನು ಮುಂದುರಿಸುವನು.

ಮೇಯರ್ : ಅದೇ, ನಿನ್ನೆ ರಾತ್ರಿ ಆ ಪಾರ್ಟಿಗೋಗಿದ್ದೆ. ಆದರೆ ನಿಜಕ್ಕೂ ಹೇಳ್ತೀನಿ; ಇತ್ತೀಚಿನ ದಿನಗಳಲ್ಲಿ ಗೋಷಾ ಹೆಣ್ಣುಗಳು ಅಷ್ಟೇನೂ ಚನ್ನಾಗಿರಲ್ಲ. ಅವರಲ್ಲಿ ಒಬ್ಬಳಂತೂ ಇಡೀ ರಾತ್ರಿ ಬಾಯಿಃ ಬಿಡಲಿಲ್ಲ. ಅನಂತರ ನನಗೆ ತಿಳೀತು, ಆಕೆ ರಾತ್ರಿ ಮಾತ್ರ ಗೋಷಾ ಅಂತಾ; ಅವರಿಗೆ ಇದೊಂದು ಥರ ಉಪವೃತ್ತಿ !

ಸ್ನೇಹಿತ : ಬಹಳ ಸ್ವಾರಸ್ಯವಾಗಿದೆ !

ವಾಟನಬಿ : ತಾವು ದಯವಿಟ್ಟು... ಅರ್ಜಿ ಪರಿಗಣಿಸ್ತೀರ (ವಾಟನಬಿ ಬಾಗಿ ನಮಸ್ಕರಿಸುತ್ತಿರುವನು. ಅವನನ್ನು ಹೊರಗೆ ಕರೆದೊಯ್ಯಲು ಒನೊ ಪ್ರಯತ್ನಿಸುತ್ತಿರುವನು. ಮೇಯರ್ ಸಿಟ್ಟನಿಂದ ತಿರುಗಿ ನೋಡುವನು, ಅವನ ಸ್ನೇಹಿತರು ತಲೆ ಎತ್ತಿ ನೋಡುವರು).

ಮೇಯರ್ : ನೀವು ಏನ್ ಹೇಳಿದ್ರಿ ?

ಈಗ ವಾಟನಬಿಯ ದೃಶ್ಯ; ಆತ ಬಾಗಿ ನಮಸ್ಕರಿಸುತ್ತಿರುವಂತೆಯೆ ಮೇಯರ್ ಅವರನ್ನು ನೋಡುತ್ತಿರುವನು.

ವಾಟನಬಿ : ಆ ಪಾರ್ಕ್ ವಿಷಯ... ದಯವಿಟ್ಟು... ಪುನಃ ಪರಿಗಣಿಸಿ.

ಈಗ ವಾಟನಬಿಯನ್ನು ಮೇಯರ್ ದುರುಗುಟ್ಟಿ ನೋಡುತ್ತಿರುವ ದೃಶ್ಯ.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ. ಮೌನದ ವಾತಾವರಣ, ಅನಂತರ ನಗುವಿನ ಶಬ್ದ. ಅವರಲ್ಲೀಗ ಬಹಳ ಮಂದಿ ಕುಡಿದ ಅಮಲಿನಲ್ಲಿರುವರು.

ಸಯಿಟೊ : ಫಲಿತಾಂಶದ ದೃಷ್ಟಿಯಿಂದ, ಪರೀಕ್ಷಿಸಿ ನೋಡಿದರೆ, ಅದೇನೂ ಅಂಥ ಕೆಟ್ಟ ಯೋಜನೆಯಾಗಿರಲಿಲ್ಲ.

ಸಕಾಯಿ : ಇಲ್ಲ, ಅದು ಬಹಳ ಅಪಾಯಕರ ಯೋಜನೆಯಾಗಿತ್ತು. ಎಲ್ಲ ಕಡೆಯಿಂದ ನಗರಸಭೆಯ ಮೇಲಿದ್ದ ಒತ್ತಡವನ್ನು ಹಾಗೇ ನೀನು ಸ್ವಲ್ಪ ಯೋಚನೆ ಮಾಡು.

ಈಗ ಕಿಮುರನ ದೃಶ್ಯ.

ಕಿಮುರ : ಆದರೆ ಮೇಯರ್ ಅದನ್ನು ಪುನಃ ಪರಿಗಣಿಸಿದರು, ಅಲ್ವೇನು ?

ನೊಗುಚಿ ; ಓಹ್, ಆ ವಿಷಯವೇನು. ಅದು ಒಬ್ಬ ಕೌನ್ಸಿಲರ ಆಲೋಚನೆ. ಅವರು ಅದನ್ನು ಮೇಯರ್ ಒಪ್ಪೊಹಾಗೆ ಮಾಡಿದ್ರು. ಈ ಎಲ್ಲವೂ ನಡೆದದ್ದು

ಒಂದು ರೀತಿ ಆಕಸ್ಮಿಕ. ಒಂದು ಕಾಕತಾಳೀಯ ಘಟನೆ—ನಿಂದು ಸುಮ್ಮನೆ ಭಾವೋದ್ರೇಕ ಅಷ್ಟೆ.

'ಭಾವೋದ್ರೇಕ' ಎಂಬ ಪದ ಕೇಳಿದಾಗ ಸ್ವಲ್ಪ ನಗುವಿನ ಶಬ್ದ.

ಸಕಾಯಿ : ಹೌದು, ನೀನು ಹೇಳಿದ್ದು ಸತ್ಯ, ಅದು ಭಾವೋದ್ರೇಕವೇ.

ಕಿಮುರ : ನನಗೇನೋ ಹಾಗನ್ನಿಸೋಲ್ಲ. ನೀವು ಸಹಾನುಭೂತಿಯಿಂದ ಯೋಚಿಸದೆ, ವಾಟನಬಿಯವರಂಥ ವ್ಯಕ್ತಿಯನ್ನು ಅರ್ಥ ಮಾಡಿಕೊಳ್ಳೋಕೆ ಪ್ರಯತ್ನಿಸದೆ ಹೋದರೆ ಇನ್ನೇನು, ಇಡೀ ಪ್ರಪಂಚ ಅಂಧಕಾರಮಯ, ಅಷ್ಟೆ.

ನೊಗುಚಿ : ಮತ್ತೆ ಈಗ ಇನ್ನೇನು—ಸಂಪೂರ್ಣ ಅಂಧಕಾರ.

ಕಿಮುರ : ವಾಟನಬಿಯವರನ್ನು ಜೀವಂತವಾಗಿಟ್ಟಿದ್ದ ಸಂಗತಿ ಏನೂ ಅಂಥಾ ನನಗೆ ಅರ್ಥವಾಗ್ತಿಲ್ಲ. ಆದರೆ ಕೆಲವು ಸಮಯದಲ್ಲಿ ಅವರ ಬಗ್ಗೆ ನನ್ಗೆ ಬಹಳ ಭಯವಾಗ್ತಿತ್ತು.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ನಗರಸಭೆಯ ಕಾರಿಡಾರ್‌ನ ದೃಶ್ಯ. ಕಿಮುರ ಮಹಡಿ ಮೆಟ್ಟಿಲ ತುದಿಯಲ್ಲಿ ನಿಂತು ಬಹಳ ದೂರದಲ್ಲಿರುವ ವಾಟನಬಿಯನ್ನು ನೋಡುವನು. ಸ್ವಲ್ಪ ಕೂಡ ಶಕ್ತಿಯಿಲ್ಲದವನ ರೀತಿ ಆತ ಗೋಡೆಗೆ ಒರಗಿಕೊಂಡಿರುವನು. ಅನಂತರ ಆತ ಬಹಳ ನಿಧಾನವಾಗಿ ಹಾಗೇ ಗೋಡೆಯ ಪಕ್ಕದಲ್ಲೇ ಕಾಲೆಳೆದುಕೊಂಡು ಮೇಯರ್ ಅವರ ಕಛೇರಿಯ ದಿಕ್ಕಿಗೆ ಚಲಿಸುವನು. ಈಗ ವಾಟನಬಿಯ ಕ್ಲೋಸ್-ಅಪ್ ದೃಶ್ಯ.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ.

ಪಾರ್ಕ್ ವಿಭಾಗದ ಗುಮಾಸ್ತ : ಮತ್ತೆ, ಆದಿನ ಪಾರ್ಕ್ ನಿವೇಶನದಲ್ಲಿ ಆದದ್ದನ್ನ ಸ್ವಲ್ಪ ಯೋಚಿಸಿ.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ಪಾರ್ಕ್ ನಿವೇಶನದ ದೃಶ್ಯ. ಧೂಳು, ಮರಳುಕಲ್ಲು ಇತ್ಯಾದಿ. ಒಂದು ಬುಲ್ಡೋಜರ್; ಆ ಬುಲ್ಡೋಜರ್ ಹೆಚ್ಚುಕಮ್ಮಿ ವಾಟನಬಿಯ ಮೇಲೆ ಹಾಯುತ್ತಿದೆ. ತಕ್ಷಣ ಹೆಂಗಸೊಬ್ಬಳು ಓಡಿಬಂದು ವಾಟನಬಿಯನ್ನು ಪಕ್ಕಕ್ಕೆ ಎಳೆದುಕೊಳ್ಳುವಳು—ಆಕೆ ಮತ್ತು ಇನ್ನಿತರರು ಅವನನ್ನು ಎತ್ತಿಕೊಂಡು ಮನೆಯೊಂದರ ಒಳಗೆ ಕೊಂಡೊಯ್ಯುವರು. ಅಲ್ಲಿ ಅವನಿಗೆ ಕುಡಿಯಲು ನೀರು ಕೊಡುವರು. ಆತ ನೀರನ್ನು ತೆಗೆದುಕೊಂಡು ಸ್ವಲ್ಪ ಗುಟುಕಿಸುವನು. ಈಗ ಪಾರ್ಕ್ ನಿವೇಶನವನ್ನು ನೋಡುತ್ತಿರುವ ವಾಟನಬಿಯ ಕ್ಲೋಸ್-ಅಪ್ ದೃಶ್ಯ.

ಪಾರ್ಕ್ ವಿಭಾಗದ ಗುಮಾಸ್ತ (ಅದೃಶ್ಯ): ಅವರು ಆ ಪಾರ್ಕ್ ಕಡೆಗೆ ನೋಡಿದಾಗ...

(ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ. ಗುಮಾಸ್ತ ಮಾತನಾಡುತ್ತಿರುವನು) ಅವರ ಮುಖದಲ್ಲಿ ಕಾಂತಿ ಚಿಮ್ಮಿತು. ತನ್ನ ಸ್ವಂತ ಮೊಮ್ಮಗನನ್ನು ನೋಡಿ ತೃಪ್ತಿಪಡುವ ವ್ಯಕ್ತಿಯ ಮುಖದ ಹಾಗಿತ್ತು ಅವರ ಮುಖ.

ಕಿಮುರ : ಅದು ತೀರ ಸಹಜ, ಪಾರ್ಕ್ ಅಂದ್ರೆ ಇನ್ನೇನು, ಅವರಿಗೆ ಮೊಮ್ಮಗನಿದ್ದ ಹಾಗೆಯೇ.

ಒನೊ : ಸರಿ, ಅದಕ್ಕೇ ಮತ್ತೆ...

ಕಿಮುರ : ಅದಕ್ಕೇ ಮತ್ತೆ, ಯಾರು ಏನೇ ಹೇಳಿಕೊಳ್ಳಲಿ, ಪಾರ್ಕ್ ನಿರ್ಮಿಸಿದ್ದು ಶ್ರೀಮಾನ್ ವಾಟನಬಿಯವರೇ ಹೊರತು ಬೇರೆಯವರಲ್ಲ.

ನೊಗುಚಿ : ಆದರೆ, ಒಂದುಪಕ್ಷ ಮೇಯರ್ ಮತ್ತು ಕೌನ್ಸಿಲರುಗಳು ಏನೂ ಮಾಡ್ದೇ ಹೋಗಿದ್ದಿದ್ರೆ, ಬಹುಃಶಃ ಯಾವ ಪಾರ್ಕೂ ಇರ್‍ತಿರಲಿಲ್ಲ. ಈ ಎಲ್ಲ ಉನ್ನತ ಪ್ರಧಾನಗಳನ್ನೂ ಇವರು ಸ್ವಲ್ಪ ಕೂಡ ಲಕ್ಷಕ್ಕೇ ತಗೋಳೋದೇ ಇಲ್ವಲ್ಲಾ ?

ಒನೊ : ಓಹ್, ನಾನು ಆ ರೀತಿ ಹೇಳ್ತಿಲ್ಲ.

ನೊಗುಚಿ : ನೀವಿನ್ನೇನೇಳಿದ್ದು ?

ಒನೊ : ನಡೆದಿದ್ದೇನು ಅಂತಾ ನಿಮಗೆ ನೆನಪಿದೆಯಾ ? ಈಗ ಪಾರ್ಕ್ ಇದೆಯಲ್ಲಾ ಆ ಜಾಗದಲ್ಲಿ ಅದೇ ಆ ಗ್ಯಾಂಗ್‌ನವರು ವೇಶ್ಯಾವಾಟಿಕೆ ಕಾಲೋನಿ ಸ್ಥಾಪಿಸಬೇಕು ಅಂತಾ ಆಲೋಚನೆ ಮಾಡಿದ್ದು.

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ಮೇಯರ್ ಅವರ ಕಛೇರಿಯ ಕಾರಿಡಾರಿನ ದೃಶ್ಯ. ವಾಟನಬಿ ಮತ್ತು ಒನೊ ಕಾರಿಡಾರಿನಲ್ಲಿ ನಡೆದು ಬರುತ್ತಿರುವರು. ಅನೇಕ ಮಂದಿ ಗೋಡೆಗೊರಗಿ ನಿಂತಿರುವರು. ಅವರಲ್ಲೊಬ್ಬ ಹಾಕಿಕೊಂಡಿದ್ದ ತನ್ನ ಕಪ್ಪುಕನ್ನಡಕವನ್ನು ತೆಗೆದು ಕೈಯಲ್ಲಿಡಿದುಕೊಳ್ಳುತ್ತ ಮುಂದಕ್ಕೆ ಬರುವನು.

ವ್ಯಕ್ತಿ : ನಾಗರಿಕ ವಿಭಾಗದ ಮುಖ್ಯಸ್ಥ ನೀವೇನ ?

ವಾಟನಬಿ : ಹೌದು, ನಾನೆ.

ವ್ಯಕ್ತಿ : ನಿಮ್ಮನ್ನ ಕಾಣ್ಬೇಕಿತ್ತು. ನೋಡಿ ಮಿಸ್ಟರ್, ಇನ್ಮೇಲೆ ನೀವು ಈ ವಿಷಯದಲ್ಲಿ ಮಧ್ಯ ತಲೆಹಾಕ್ಬೇಡಿ, ಗೊತ್ತಾಯ್ತೇನು ?

ಆತ ವಾಟನಬಿಯ ಕೋಟಿನ ಕಾಲರ್ ಜಗ್ಗಿ ನಗುವನು. ವಾಟನಬಿ ಅವನ ಕಡೆಗೆ ನೋಡುವನು.

ವಾಟನಬಿ: ಯಾಕೆ? ನೀವ್ಯಾರು ?

ವ್ಯಕ್ತಿಯು ವಾಟನಬಿಯು ಕೋಟಿನ ಕಲರ್ ಹಿಡಿತವನ್ನು ಇನ್ನೂ ಬಿಗಿ ಗೊಳಿಸುವನು.

ವ್ಯಕ್ತಿ : ಮೂರ್ಖನ ಹಾಗೆ ವರ್ತಿಸಬೇಡ ; ನೋಡು, ನಾನು ನಿನಗೇ ಹೇಳ್ತಿರೋದು. ಎಲ್ಲವನ್ನೂ ಇಲ್ಲಿಗೇ ನಿಲ್ಲಿಸಿಬಿಡು. ಇನ್ನುಮುಂದೆ ಏನೂ ಗೊತ್ತಿಲ್ಲದವನ ಹಾಗೆ ವರ್ತಿಸಬೇಡ.

ಈಗ ವಾಟನಬಿಯು ದೃಶ್ಯ, ಆತ ನಗುತ್ತಿರುವನು.

ಈಗ ವ್ಯಕ್ತಿಗಳ ಗುಂಪಿನ ದೃಶ್ಯ ; ವ್ಯಕ್ತಿ ವಾಟನಬಿಯುನ್ನು ಕೈಬಿಡುವನು. ವಾಟನಬಿಯು ಮೇಯರ್ ಅವರ ಕಛೇರಿಯ ಒಳಗೆ ಹೋಗಲು ತಿರುಗುವನು. ಅದೇ ಸಮಯಕ್ಕೆ ಸರಿಯಾಗಿ ಅವರಲ್ಲೊಬ್ಬ ವ್ಯಕ್ತಿ ಉದ್ದೇಶಪೂರ್ವಕವಾಗಿ ಗುಂಪಿನಿಂದ ಮುಂದೆ ಬಂದು ವಾಟನಬಿಯು ಕಡೆ ನೋಡುವನು.

ವ್ಯಕ್ತಿ : ವಾಟನಬಿ ಇವನೇ—ನೆನಪಿರ್‍ಲಿ.

ಆತ ವಾಟನಬಿಯುನ್ನು ದುರುಗುಟ್ಟಿ ನೋಡುವನು ; ಅದಕ್ಕೆ ಪ್ರತಿಯಾಗಿ ವಾಟನಬಿ ನಕ್ಕು, ಅನಂತರ ಕಛೇರಿಯ ಒಳಗೆ ಹೋಗುವನು. ರೌಡಿಗಳ ಗುಂಪು ಹೊರಟು ಹೋಗುವುದು. ಒನೊ ಅವರನ್ನೇ ನೋಡುತ್ತ ನಿಂತಿರುವನು.

ವಾಟನಬಿಗೆ ಕೊಲ್ಲುವ ಬೆದರಿಕೆ ಹಾಕಿದ ಎರಡನೆಯ ವ್ಯಕ್ತಿ ಹಿಂದಿರುಗಿ ಒನೊ ಕಡೆಗೆ ನೋಡುವನು : ಒನೊ ತಕ್ಷಣ ಹಿಂದಿರುಗಿ ಆತುರಾತುರವಾಗಿ ಕಛೇರಿಯ ಒಳಗೆ ಹೋಗುವನು.

ಈಗ ವಾಟನಬಿಯು ಆರಾಧನಾ ಸಮಾರಂಭದ ದೃಶ್ಯ. ಎಲ್ಲರೂ ಪಾನ ಮತ್ತರಾಗಿರುವರು. ಮುದುಕ ಒಹಾರ ಚಿಂತಾಮಗ್ನನಾಗಿರುವನು ; ಅವನ ತಲೆ ಒಂದು ಪಕ್ಕಕ್ಕೆ ವಾಲಿಕೊಂಡಿದೆ.

ಒಹಾರ : ಆದರೂ ಇದು ನಿಜಕ್ಕೂ ಬಹಳ ಆಶ್ಚರ್ಯ. ಅವರು ಹೀಗೆ ಯಾಕೆ ಬದಲಾದ್ರೂ, ಅಂತಾ ನನಗಿನ್ನೂ ಅರ್ಥವಾಗ್ತಿಲ್ಲ—ತಮಗೆ ಕ್ಯಾನ್ಸರ್ ಇರೋ ವಿಷಯ ಅವರಿಗೆ ಗೊತ್ತಿದ್ದಿರಬೇಕು.

ಪಾನಮತ್ತನಾಗಿರುವ ಒನೊ ಇದ್ದಕ್ಕಿದ್ದಂತೆ ಎದ್ದು ಕುಳಿತುಕೊಂಡು ಏನೊ ಸನ್ನೆಮಾಡುವನು.

ಒನೊ : ನನಗೆ ಈಗ ನೆನಪಾಯ್ತು!

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ನಗರಸಭೆಯ ಮಹಡಿ ಮೆಟ್ಟಿಲ ದೃಶ್ಯ ; ಒನೊ ವಾಟನಬಿಗೆ ದೀರ್ಘ ಭಾಷಣ ಬಿಗಿಯುತ್ತಿರುವನು ; ಸುಸ್ತಾಗಿರುವ ವಾಟನಬಿ ಮಹಡಿಯ ಕಟಕಟೆಯನ್ನು ಬಾಗಿ ಒರಗಿಕೊಂಡು ಒನೊ ಹೇಳುವ ಮಾತುಗಳನ್ನು ಕೇಳುತ್ತಿರುವನು.

ಒನೊ : ಇದು ತೀರ ವಿಪರೀತವಾಯ್ತು. ಎರಡು ವಾರಗಳಿಂದಲೂ ನೀವು ಇದೇ ಕೆಲಸ ಮಾಡ್ತಿದೀರಿ. ಅವರು ನಿಮಗೆ ಮಾಡಬಹುದಾದ ಒಂದು ಸಣ್ಣ ಕೆಲಸ ಅಂದರೆ ಅವರ ಬಳಿ ಹಣ ಇದೆಯೊ ಇಲ್ಲವೊ ಅಂತಾ ಮಾತ್ರ ಹೇಳಬಹುದು, ಅಷ್ಟೆ. ಇನ್ನು, ನಿಮ್ಮನ್ನ ಅವರು ನಡಸ್ಕೊಳ್ಳೋ ರೀತಿ ; ಕಡೇಪಕ್ಷ ಅವರು ಸ್ವಲ್ಪ ಮೃದುವಾಗಾದರೂ ವರ್ತಿಸಬಹುದು. ಈ ರೀತಿ ಅವಮಾನಕರವಾಗಿ ನಡೆಸಿಕೊಳ್ಳೋದನ್ನು ಕಂಡು ನಿಮಗೆ ಕೋಪ ಬರಬೇಕು.

ವಾಟನಬಿ : ಆದರೆ, ನನಗೆ ಕೋಪಬರೋದಿಲ್ಲ. ಯಾರ ಜೊತೆಯೂ ಕೋಪ ಮಾಡಿ ಕೊಳ್ಳೋದಿಕ್ಕೂ ನನ್ನ ಬಳಿ ಸಮಯವಿಲ್ಲ.

ಆತ ಮೆಟ್ಟಿಲಿಳಿದು ಕೆಳಗೆ ಹೋಗುವನು.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ. ಪ್ರತಿಯೊಬ್ಬನೂ ಏನೇನೋ ಜ್ಞಾಪಿಸಿಕೊಂಡು ಮಾತನಾಡುತ್ತಿರುವನು ; ಗೊಂದಲದ ವಾತಾವರಣ.

ಒನೊ : ಆಮೇಲೇನಾಯ್ತೂ ಅಂದ್ರೆ...

ಸಯಿಟೊ : ನೀನೀಗ ಪ್ರಸ್ತಾಪಿಸಿದೆಯಲ್ಲ ಆ ವಿಷಯ...ನನ್ಗೂ ಒಂದು ಸಂದರ್ಭ ನೆನಪಾಗ್ತಿದೆ, ಯಾವದು ಅಂದ್ರೆ...

ಫ್ಲಾಶ್‌ಬ್ಯಾಕ್‌ನಲ್ಲಿ ಈಗ ಪಾರ್ಕ್ ನಿವೇಶನದ ಮೇಲಿರುವ ಸೇತುವೆಯ ದೃಶ್ಯ ; ಸೂರ್ಯಾಸ್ತದ ಸಮಯ. ವಾಟನಬಿ ಮತ್ತು ಸಯಿಟೊ ಆ ಸೇತುವೆಯನ್ನು ದಾಟಿಹೋಗುತ್ತಿರುವರು.

ವಾಟನಬಿ : ಓಹ್, ಎಷ್ಟು ಸುಂದರವಾಗಿದೆ...(ಆತ ನೋಡುವನು)... ಇಡೀ ಮೂವತ್ತು ವರ್ಷಗಳ ಅವಧಿಯಲ್ಲಿ ನಾನೊಂದು ಸೂರ್ಯಾಸ್ತವನ್ನು ನೋಡ ಲಿಲ್ಲ. ಈಗ ಹೆಚ್ಚು ಕಾಲಾವಕಾಶವೇ ಇಲ್ಲ.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ.

ಸಕಾಯಿ : ಈಗೆಲ್ಲ ಸ್ಪಷ್ಟವಾಯಿತು...
ನೊಗುಚಿ : ತಾನಿನ್ನು ಬಹಳ ದಿನ ಬದುಕಿರೋಲ್ಲ ಎಂಬ ವಿಷಯ ಅವರಿಗೆ ಅರಿವಾಗಿತ್ತು.
ಸಯಿಟೊ : ಆ ಘಟನೆ ಎಲ್ಲವನ್ನೂ ಸ್ಪಷ್ಟಗೊಳಿಸ್ತು ; ನಿಚ್ಚಳಗೊಳಿಸ್ತು. ಅವರು ಯಾಕೆ ಆ ರೀತಿ ವರ್ತಿಸಿದ್ರೂ ಅಂತಾ ಈಗ ನನ್ಗೆ ಅರ್ಥವಾಗ್ತಿದೆ, ಅವರು ಹಾಗೆ ವರ್ತಿಸಿದ್ದರಲ್ಲಿ ಆಶ್ಚರ್ಯವೇನಲ್ಲ, ಅದು ತುಂಬಾ ಸಹಜ.
ಒನೊ : ಬಹುಶಃ ನಾವೆಲ್ಲ ಕೂಡ ಅದೇ ರೀತಿ ನಡ್ಕೋತಿದ್ವೊ.

ಈಗ ಕಿಮುರನ ದೃಶ್ಯ.

ಕಿಮುರ : ನಾವೆಲ್ಲರೂ ಒಂದು ದಿನ ಸಾಯುವವರೆ.

ಈಗ ಇಡೀ ಗುಂಪಿನ ದೃಶ್ಯ. ಕ್ಷಣ ವಿರಾಮ, ಅನಂತರ ಒಹಾರ ಮುಂದೆ ಬರುವನು.

ಒಹಾರ : ಒನೊ, ಇಲ್ನೋಡು, ಈಗ ನನ್ಗೆ ಹಾಗನ್ನಿಸೋಲ್ಲ... ಸ್ವಾಮಿ, ನಾಗರೀಕ ವಿಭಾಗದ ಹೊಸ ಮುಖ್ಯಾಧಿಕಾರಿಗಳೇ, ನನ್ನ ಅನಿಸಿಕೆ ಅದಲ್ಲ. ಇಲ್ನೋಡಿ, ನಾನು ಹೇಳಿದ್ದು ಕೇಳಿಸ್ಲಿಲ್ವಾ ?

ಈಗ ಒನೊ ದೃಶ್ಯ. ಆತ ಕುಡಿದು ಮತ್ತನಾಗಿರುವನು. ಈ ಮಾತುಗಳನ್ನು ಕೇಳಿ ಅವನಿಗೆ ಸಂತೋಷ. ಸಂಕೋಚ ಎರಡೂ ಏಕಕಾಲದಲ್ಲಿ ಉಂಟಾಗುವುದು.

ಒನೊ : ನಾನಿನ್ನೂ ಆ ಹುದ್ದೆಗೆ ನೇಮಕವಾಗಿಲ್ಲ.
ಒಹಾರ : ಇಲ್ಲ, ಪರವಾಗಿಲ್ಲ, ಒನೊ, ಈಗ ನೀನು ಹೇಳಿದ್ದೇನು ? ನಾವೆಲ್ಲರೂ ಕೂಡ ಅವರ ರೀತೀಲೆ ನಡ್ಕೋತಿದ್ವೊ ಅಂತಾನಾ ? ನನ್ಗೆ ನಗು ಬರಿಸಬೇಡ. (ಆತ ಕುಡಿದ ಮತ್ತಿನಲ್ಲಿ ಒನೊ ಕಡೆಗೆ ಬೊಟ್ಟು ಮಾಡುವನು) ವಾಟನಬಿಯವರು ಮಾಡಿದ ಥರ ಮಾಡೋಕೆ ನಿಮುಗ್ಯಾರಿಗೂ ಸಾಧ್ಯವಿಲ್ಲ. ನನ್ಗೆ ನಗೂ ಬರಿಸಬೇಡ. ನನ್ನ ವಿಷಯ ಬಿಡು, ನಾನು ಕೇವಲ ರಾತ್ರಿ ಶಾಲೆಗೆ ಹೋಗಿ ಕಲಿತವನು, ಅದಕ್ಕೇ ನಾನು ಯಾವ ನಾಗರಿಕ ವಿಭಾಗದ ಮುಖ್ಯಸ್ಥನೂ ಆಗೋಕೆ ಎಂದೂ ಸಾಧ್ಯವಿಲ್ಲ. ಆದರೆ ಒನೊ ನೀನು, ನಿನ್ನಂಥವರು ಮುಖ್ಯಸ್ಥರಾಗಲಹುದು. ಇಲ್ಲ, ದಯವಿಟ್ಟು ನನಗೆ ನಗು ಬರಿಸಬೇಡ.

ಒಹಾರನ ಮಾತು ನಿಲ್ಲಿಸಲು ಸಯಿಟೊ ಪ್ರಯತ್ನಿಸುವನು : ಅನಂತರ ಯಾವುದೋ ಹೊಸ ಆಲೋಚನೆಯೊಂದು ಹೊಳೆದು ಕ್ಷಣಕಾಲ ಸುಮ್ಮನಿರುವನು.

ಸಯಿಟೊ : ಮಿಸ್ಟರ್ ವಾಟನಬಿಯುವರ ಜೊತೇಲಿ ಹೋಲಿಸಿ ನೋಡಿದ್ರೆ ನಾವೆಲ್ಲ ಕೇವಲ...

ಒಹಾರ : ನಾವೆಲ್ಲ ಕಸಕ್ಕೆ ಸಮಾನರು, ನಿಷ್ಪ್ರಯೋಜಕರು. ನೀನೂ ಅಷ್ಟೇ, ನಿಷ್ಪ್ರಯೋಜಕ.

ಸಕಾಯಿ : ನಾವೆಲ್ಲ ನಿಷ್ಪ್ರಯೋಜಕರು. ಓಹ್, ನಗರಸಭೆಯಲ್ಲಿ ಕೆಲವರು ತುಂಬ ಒಳ್ಳೇ ಜನ ಇದ್ದಾರೆ, ಆದರೆ ಅಲ್ಲಿ ನೀನು ತುಂಬ ದಿನ ಕೆಲಸ ಮಾಡಿದ್ರೆ ಅದು ನಿನ್ನನ್ನ ಬದಲಾಯಿಸಿಬಿಡುತ್ತೆ.

ನೊಗುಚಿ : ಹೌದು, ಅಂಥ ಸ್ಥಳದಲ್ಲಿ ನೀನು ಯೋಚಿಸೋಕೆ ಕೂಡ ಪ್ರಯತ್ನಿಸೋಲ್ಲ. ನೀನು ಒಂದು ಪಕ್ಷ ಯೋಚಿಸಿದೆಯೋ ನೀನೊಬ್ಬ ಅಪಾಯಕಾರಿ ಮನುಷ್ಯ ಆಗ್ಬಿಡ್ತೀಯ. ನೀನೇನೋ ಮಹಾ ಯೋಚಿಸ್ತಿದೀಯಾ, ಕೆಲಸಮಾಡ್ತಿದೀಯಾ ಅನ್ನೋ ರೀತಿಲಿ ಅಲ್ಲಿ ನಾಟಕ ಆಡಬೇಕು.

ಲೋಕೋಪಯೋಗಿ ಇಲಾಖೆಯ ಗುಮಾಸ್ತೆ : ನಿಜ, ನೀನೇಳಿದು ಸತ್ಯವಾದ ಮಾತು.

ಸಾರ್ವಜನಿಕ ವ್ಯವಹಾರ ವಿಭಾಗದ ಗುಮಾಸ್ತ : ಹೌದು, ನಿಜ.

ಸಯಿಟೊ : ಅಲ್ಲಿ ನೀನೇನೂ ಮಾಡೋಕೆ ಸಾಧ್ಯವಿಲ್ಲ. ಯಾಕೆ ಗೊತ್ತ ? ಅಲ್ಲಿ ನೀನೊಂದು ಕಸದ ಬುಟ್ಟಿಗೆ ಒಪ್ಪಿಗೆ ತಗೊಬೇಕಾದ್ರೆ, ಆ ಕಸದಬುಟ್ಟಿ ತುಂಬೋವಷ್ಟು ಪ್ರಮಾಣಪತ್ರಗಳನ್ನು ನೀನು ಸಿದ್ಧಗೊಳಸಬೇಕಾಗುತ್ತೆ.

ಸಕಾಯಿ ಆವೇಶದಿಂದ ಮುಂದೆ ಬರುವನು, ಅನಂತರ ಇದ್ದಕ್ಕಿದ್ದಂತೆ ಅಳತೊಡಗುವನು.

ಸಕಾಯಿ : ಆಮೇಲೆ, ನೀನು ಎಲ್ಲದರ ಮೇಲೂ ನಿನ್ನ ಮುದ್ರೆ ಒತ್ಬೇಕು, ಮುದ್ರೆ! ಮುದ್ರೆ ! ಮುದ್ರೆ !

ನೊಗುಚಿ : ನಾವು ಹೇಗೆ ಜೀವಿಸ್ತಿದೀವಿ ಅಂದ್ರೆ, ಸಮಯವನ್ನು ಕದ್ದು ಜೀವಿಸ್ತಿದೀವಿ. ಜನ ಅಧಿಕಾರಿಗಳ ಲಂಚರುಷುವತ್ತುಗಳ ಬಗ್ಗೆ ದೂರ್ತಾರೆ! ಆದರೆ ನಾವು ಸಮಯವನ್ನು ವ್ಯರ್ಥವಾಗಿ ಹಾಳುಮಾಡುವುದನ್ನ ನೋಡಿದ್ರೆ, ಆ ಲಂಚ ರುಷುವತ್ತುಗಳು ಇದರ ಮುಂದೆ ಏನೇನೂ ಅಲ್ಲ.

ಕೈಗಳನ್ನು ನೆಲಕ್ಕೂರಿ ಒನೊ ಪ್ರಾಣಿಯ ರೀತಿಯಲ್ಲಿ ಅಂಬೆಗಾಲಿಡುತ್ತ ನಡೆದುಕೊಂಡು ಕೊಠಡಿಯ ಮಧ್ಯಭಾಗಕ್ಕೆ ಬರುವನು ; ಅನಂತರ ಕೈಗಳನ್ನು ಮೇಲೆತ್ತಿ ಬಾವುಟದಂತೆ ಆಡಿಸುವನು.

ಒನೊ : ಸ್ನೇಹಿತರೆ, ಇಲ್ಲಿ ಕೇಳಿ, ನಿಮ್ಮ ಯಾತನೆ ನನಗೂ ತಿಳಿಯುತ್ತೆ. ನಾನು ಈ ಬಗ್ಗೆ ಯೋಚನೆ ಮಾಡಿದೀನಿ! ಆದರೆ ಅಂಥ ದೊಡ್ಡ ವ್ಯವಸ್ಥೆಯಲ್ಲಿ ನಾವೇನು ಮಾಡೋಕಾಗುತ್ತೆ—ಅಲ್ಲದೆ, ಯೋಚಿಸೋದಕ್ಕೆ ಪುರುಸೊತ್ತಾದರೂ ಎಲ್ಲಿದೆ ?

ಒಹಾರ ; ಅಯ್ಯೋ ದಡ್ಡ (ಎಲ್ಲರೂ ಅವನನ್ನು ಸುತ್ತ ನೋಡುವರು).

ಸಯಿಟೊ : ಆದರೆ ಒಹಾರ, ಇಲ್ನೋಡು ; ನೀನು ಏನೂ ಮಾಡೋಕೆ ಸಾಧ್ಯವಾಗದೆ ಇರೋ ಈ ವ್ಯವಸ್ಥೆಯಲ್ಲಿ ಮಿಸ್ಟರ್ ವಾಟನಬಿಯವರು ಏನೋ ಸ್ವಲ್ಪ ಮಾಡಿದ್ರು. ಮತ್ತೆ ಅವರು ಯಾಕೆ ಹಾಗೆ ಮಾಡಿದ್ರು ಅಂದ್ರೆ ಅವರಿಗೆ ಕ್ಯಾನ್ಸರ್ ಇತ್ತು, ಅದಕ್ಕೆ.

ಸಯಿಟೊ : ನಾನು ಹೇಳ್ಬೇಕೂ ಅಂದ್ಕೊಂಡಿದ್ದೂ ಇದನ್ನೇ. (ಆತ ಪುನಃ ಬಿಕ್ಕಿಬಿಕ್ಕಿ ಅಳುವನು.)

ನೊಗುಚಿ : ಓಹ್, ಇದೆಲ್ಲ ಕೇಳಿದ್ರೆ ನನ್ಗೆ ಹುಚ್ಚುಹಿಡಿಯುತ್ತೆ ಅನ್ನಿಸ್ತಿದೆ.

ಸಕಾಯಿ : ನನ್ಗೂ ಹಾಗೇ ಆಗ್ತಿದೆ.

ಅವರೆಲ್ಲರೂ ನೆಲದ ಮೇಲೆ ಅಂಬೆಗಾಲಿಕ್ಕಿ ತೆವಳುತ್ತಿರುವರು.

ಸಯಿಟೊ : ಓಹ್, ಆದರೆ ಮಿಸ್ಟರ್ ವಾಟನಬಿಯವರಿಗೆ ಏನನ್ನಿಸಿರ್ಬೇಕು ಅಂತಾ ನಾನು ಯೋಚಿಸಿದ್ರೆ...

ನೊಗುಚಿ : ಯಾರ್ದ್ದೋ ಬದಲು ಯಾರೋ ಹೋಗಿ ಗೌರವ ಪಡೆಯೋದು ಅವಮಾನವೀಯ ವರ್ತನೆ.

ಒಹಾರ : ಓಹ್! ಹೂಂ, ಮೇಯರ್ ಅಂತಾ ಹೇಳು. ಇದರಲ್ಲಿ ಮುಚ್ಚುಮರೆ ಯಾಕೆ ?

ನೊಗುಚಿ : ನೋಡು, ಮಾತಿನಮೇಲೆ ನಿಮಗೆ ಸ್ವಲ್ಪ ನಿಗಾ ಇರ್ಲಿ.

ಕ್ಷಣ ವಿರಾಮ, ಸಕಾಯಿ ನಿಧಾನವಾಗಿ ಅಳುತ್ತಿರುವನು.

ಸಕಾಯಿ : ತಾವು ಒಬ್ಬರೇ ಒಂಟಿಯಾಗಿ ಪಾರ್ಕ್‌ನಲ್ಲಿ ಕೂತು ಸಾಯೋ ಹೊತ್ನಲ್ಲಿ ಮಿಸ್ಟರ್ ವಾಟನಬಿಯವರಿಗೆ ಹೇಗನ್ನಿಸಿರಬೇಕು ? ಇದರ ಬಗ್ಗೆ ಯೋಚಿಸಿದ್ರೆ ನನಗೆ ಭಯವಾಗುತ್ತೆ.

ಈಗ ಅವರಲ್ಲಿ ಬಹಳ ಮಂದಿ ಅಳತೊಡಗುವರು. ಕಿಮುರ ಒಬ್ಬ ಮಾತ್ರ ಅಳುತ್ತಿಲ್ಲ.

ಈಗ ಸಮಾಧಿಪೀಠದ ಮೇಲೆ ವಾಟನಬಿಯ ಭಾವಚಿತ್ರವಿರುವ ದೃಶ್ಯ.

ಈಗ ಬಾಗಿಲ ದೃಶ್ಯ. ವಾಟನಬಿಯ ಹ್ಯಾಟನ್ನು ಹಿಡಿದುಕೊಂಡು ಪರಿಚಾರಿಕೆಯೊಬ್ಬಳು ಒಳ ಬರುವಳು. ಈಗದು ಮುದುಡಿದೆ, ಕೊಳೆಯಾಗಿದೆ.

ಪರಿಚಾರಿಕೆ : ಕ್ಷಮಿಸಿ, ಇದನ್ನ ಪೋಲಿಸಿನವನು ಈಗತಾನೆ ತಂದುಕೊಟ್ಟ. ಅವನಿಗದು ಪಾರ್ಕ್‌ನಲ್ಲಿ ಸಿಕ್ತಂತೆ.

ಈಗ ಅವಳ ಕೈಯಲ್ಲಿರುವ ವಾಟನಬಿಯ ಹ್ಯಾಟ್‌ನ ಕ್ಲೋಸ್‌–ಅಪ್‌ ದೃಶ್ಯ. ಹ್ಯಾಟನ್ನು ನೋಡಲು ಎಲ್ಲರೂ ಅವಳ ಕಡೆಗೆ ತಿರುಗುವರು.

ಪರಿಚಾರಿಕೆ : ಮತ್ತೆ, ಅವನು ಹೇಳ್ದ, ಒಳಗೆ ಬಂದು ವಾಟನಬಿಯವರಿಗೆ ಶ್ರದ್ಧಾಂಜಲಿ ಅರ್ಪಿಸೋದಕ್ಕೆ ಇಷ್ಟಪಡ್ತಾನಂತೆ.

ಈಗ ಒಬ್ಬ ಯುವ ಪೋಲಿಸ್ ಪೇದೆ ಒಳಬಂದು, ಎಲ್ಲರಿಗೂ ಬಾಗಿ ವಂದಿಸಿ, ಸಮಾಧಿ ಪೀಠದ ಬಳಿಗೆ ಹೋಗಿ ಪ್ರಾರ್ಥಿಸಿ, ಅನಂತರ ನಿರ್ಗಮಿಸಲು ಮೇಲಕ್ಕೇಳುವನು.

ಕಾಜುಹೆ : ನೀವು ಬಂದದ್ದಕ್ಕೆ ಧನ್ಯವಾದಗಳು.

ಕೀಚಿ : ನೀವು ಕುಳಿತು ಸ್ವಲ್ಪ ಮದ್ಯ ತಗೋಬಹುದಲ್ಲ ?

ಆತ ಪೋಲಿಸಿನವನಿಗೆ ಕೂರಲು ಒಂದು ಸೋಫಾ ತೋರಿಸುವನು. ಅನಂತರ ಪೋಲಿಸಿನವನಿಗೆ ಒಂದು ಲೋಟ ಮದ್ಯ ಸುರಿಯುವನು. ಪೋಲಿಸಿನವನು ಬಹು ಸಂಕೋಚದಿಂದ ಮದ್ಯ ತೆಗೆದುಕೊಂಡು ಕುಡಿದು, ಲೋಟ ಕೆಳಗಿಡುವನು. ಆತ ತಾನು ಮಾತನಾಡಬೇಕೇ ಬೇಡವೇ ಎಂಬ ಧ್ವಂಧ್ವದಲ್ಲಿರುವಂತೆ ಕಾಣುವನು.

ಪೋಲಿಸ್ ಪೇದೆ : ನಾನು... ನಾನು ಆ ದಿನ ರಾತ್ರಿ ಪಾರ್ಕ್‌ನಲ್ಲಿ ಅವರನ್ನ ನೋಡಿದ್ದೆ. ಆಗ ಬಹುಶಃ ಹತ್ತುಗಂಟೆ ಇರ್ಬೇಕು. ಅಲ್ಲ...(ತನ್ನ ಕೈಗಡಿಯಾರದ ಕಡೆ ನೋಡುವನು) ಹನ್ನೊಂದು ಗಂಟೆಯ ಹತ್ತಿರ ಆಗಿತ್ತು ಅಂತ ಕಾಣುತ್ತೆ. ಮಕ್ಕಳು ಆಡೋ ಒಂದು ಉಯ್ಯಾಲೆಯ ಮೇಲೆ ಅವರು ಕುಳಿತಿದ್ರು. ಅವರು ಬಹುಶಃ ಕುಡಿದಿರಬಹುದು ಅಂದುಕೊಂಡೆ. ಆದರೂ ನನ್ನ ಪಾಡಿಗೆ ನಾನು ಸುಮ್ಮನಿದ್ದುಬಿಟ್ಟೆ. ನಾನೇನಾದ್ರೂ ಸ್ವಲ್ಪ ಬುದ್ಧಿವಂತಿಕೇಲಿ ನಡಕೊಂಡಿದ್ರೆ ಹೀಗೆ ನಡೆದಿರೋಥರ ಏನೂ ಆಗ್ತಿರಲಿಲ್ಲ. ನಿಜವಾಗಿಯೂ ನನ್ಗೆ ಬಹಳ ಪಶ್ಚಾತ್ತಾಪವಾಗ್ತಿದೆ (ಆತ ತಲೆ ತಗ್ಗಿಸುವನು).

ಪೋಲಿಸ್ ಪೇದೆ ಇದೀಗ ಕೈಯಲ್ಲಿಡಿದಿರುವ ಹ್ಯಾಟನ್ನು ಮಿತ್ಸು ದಿಟ್ಟಿಸುತ್ತಿರುವ ದೃಶ್ಯ.

ಪೋಲಿಸ್ ಪೇದೆ : ಆದರೆ, ಅವರು ತುಂಬಾ ಖುಷಿಯಾಗಿರೋ ಥರ ಕಾಣಿಸ್ತಿದ್ರು. ಹೀಗೆ ಅಂಥ ನಾನು ಹ್ಯಾಗೆ ಹೇಳ್ಲಿ ? ಮತ್ತವರು ಹಾಡ್ತಾ ಇದ್ರು... ಒಳ್ಳೇ ರಾಗವಾಗಿ ; ಆ ಹಾಡು ನನ್ನ ಹೃದಯವನ್ನು ಕಲಕಿತ್ತು.

ಫ್ಲಾಶ್‌ಬ್ಲಾಕ್‌ನಲ್ಲಿ ಈಗ ಪಾರ್ಕ್ ದೃಶ್ಯ. ವಾಟನಬಿಯು ಮಕ್ಕಳ ತೂಗು ಯ್ಯಾಲೆಯ ಮೇಲೆ ಕುಳಿತಿರುವುದು ದೂರಕ್ಕೆ ಕಾಣಿಸುವುದು. ಮಂಜು ಸುರಿಯುತ್ತಿದೆ. ಆತ ಹಾಡುತ್ತಿರುವನು. ಕ್ಯಾಮರ ಮುಂದೆ ಮುಂದೆ ಚಲಿಸುತ್ತ ಈ ದೃಶ್ಯ ಹತ್ತಿರ ವಾಗುತ್ತಿದೆ.

ವಾಟನಬಿ : ಜೀವನ ಬಲುಕ್ಷಣಿಕ
ಪ್ರೇಮಿಸು ನೀ ಮುದ್ದಿನ ಹೆಣ್ಣೆ
ನಿನ್ನಧರಗಳಲಿ ರಂಗಿರುವಾಗಲೇ
ನೀ ಮುಂದೆ ಪ್ರೇಮಿಸಲು ಸಾಧ್ಯವಾಗದ ಮುನ್ನ
ಏಕೆ ಎನೆ ನಿನ್ನ ಪಾಲಿಗೆ ಎಂದೆಂದು ಇಲ್ಲ ನಾಳೆ.

ಈಗ ಮೇಲಿನ ದೃಶ್ಯ ಕ್ರಮೇಣ ಕರಗಿಹೋಗಿ ಸಮಾಧಿಪೀಠದ ಮೇಲೆ ವಾಟನಬಿಯ ಭಾವಚಿತ್ರವಿರುವ ದೃಶ್ಯ. ಹಾಡು ಮುಂದುವರಿದಿರುವಂತೆಯೇ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ ; ಅಲ್ಲಿ ನೆರೆದಿರುವವರ ಮುಖಗಳ ದೃಶ್ಯ ; ಅನಂತರ ಮಿತ್ಸು ಎದ್ದು ನಿಲ್ಲುತ್ತಿರುವ ದೃಶ್ಯ ; ಆತ ಭಾವಾವೇಶಗೊಂಡು ಕಾರಿಡಾರಿಗೆ ಹೋಗುವನು. ಅವನ ಹೆಂಡತಿ ಕಾಜುಹೆ, ಮಿತ್ಸುವಿನ ಚಿಕ್ಕಪ್ಪನೊಡನೆ ಹಿಂದೆಯೇ ಮಿತ್ಸು ಇದ್ದಲ್ಲಿಗೆ ಹೋಗುವಳು.

ಮಿತ್ಸು : ಆ ದಿನ ರಾತ್ರಿ ಮಹಡಿಯ ಮೇಲೆ ಒಂದು ಪೆಟ್ಟಿಗೆ ಸಿಕ್ತು. ಅದರ ಮೇಲೆ ನನ್ನ ಹೆಸರಿನ ಚೀಟಿ ಅಂಟಿಸಿತ್ತು. ಅದರ ಒಳಗೆ ಅಪ್ಪನ ಪಾಸ್‌ಬುಕ್, ಅವರ ಮೊಹರು ಮತ್ತು ಅವರ ನಿವೃತ್ತಿ ಭತ್ಯಕ್ಕೆ ಸಂಬಂಧಿಸಿದ ಕಾಗದ ಪತ್ರಗಳು ಇದ್ದುವು.

ಕಾಜುಹೆ : ಅವರೇ ಅವುಗಳನ್ನು ಬಿಟ್ಟು...

ಮಿತ್ಸು : ಆದರೆ, ಅವರು ಹಾಗೆ ಮಾಡ್ಬಾರ್ದಿತ್ತು. ತಮಗೆ ಕ್ಯಾನ್ಸರ್ ಇತ್ತು ಅಂತಾ ಗೊತ್ತಿದ್ದಮೇಲೆ, ಅವರು ನನಗ್ಯಾಕೆ ಹೇಳ್ಲಿಲ್ಲ ? (ಆತ ಅಳತೊಡಗುವನು. ಅವನ ಚಿಕ್ಕಪ್ಪ ಮುಂದಕ್ಕೆ ಬರುವನು)

ಕೀಚಿ : ಮತ್ತೆ, ಅವರು ಇಟ್ಟುಕೊಂಡಿದ್ದವಳು, ಅವಳ್ಯಾಕೆ ಅಂತ್ಯಕ್ರಿಯೆಗೆ ಬರಲಿಲ್ಲ ? ಬಹುಶಃ ಅವರು ಯಾರನ್ನೂ ಇಟ್ಟುಕೊಂಡಿರ್ಲಿಲ್ವೋ ಏನೋ ?

ಈಗ ಸಾಮಾನು ತುಂಬಿರುವ ಪೆಟ್ಟಿಗೆಯ ಕ್ಲೋಸ್–ಅಪ್ ದೃಶ್ಯ. ಅದರಲ್ಲಿ ಕಟ್ಟುಹಾಕಿಸಿರುವ ಅಭಿನಂದನ ಪತ್ರಗಳು, ಒಂದು ಅಲಾರಂ ಗಡಿಯಾರ, ಒಂದು ಮೊಲದ ಬಿಳಿಗೊಂಬೆ–ಇವೆ.

ಈಗ ವಾಟನಬಿಯ ಆರಾಧನಾ ಸಮಾರಂಭದ ದೃಶ್ಯ. ಕುಡಿದು ಮತ್ತರಾಗಿ, ಉದ್ರೇಕಿತರಾಗಿರುವ ಪುರುಷರೆಲ್ಲ ತೀರ ಹತ್ತಿರಹತ್ತಿರವಾಗಿ ಕುಳಿತಿರುವರು. ಈ ದೃಶ್ಯದಲ್ಲಿ ಕಿಮುರ ಅವರನ್ನೆಲ್ಲ ಬಿಟ್ಟು ಒಬ್ಬನೇ ಎದ್ದು ಹೋಗಿ ಸಮಾಧಿಪೀಠದ ಎದುರು ಮಂಡಿಯೂರಿ ಕುಳಿತು ವಾಟನಬಿಯ ಭಾವಚಿತ್ರವನ್ನು ದಿಟ್ಟಿಸಿ ನೋಡುತ್ತಿರುವನು.

ಸಕಾಯಿ ; ನಾವೆಲ್ಲ ಕಷ್ಟಪಟ್ಟು ಕೆಲಸ ಮಾಡಬೇಕು.

ನೊಗುಚಿ : ಹೌದು, ವಾಟನಬಿಯವರು ತೋರಿಸಿದಂತಹ ಹುಮ್ಮಸ್ಸಿನಲ್ಲಿ.

ಸಯಿಟೊ : ಅವರ ಸಾವು ಅರ್ಥಹೀನವಾಗೋದಿಕ್ಕೆ ನಾವು ಬಿಡಬಾರದು.

ಒನೊ : ನಾನು—ನಾನು ಹೊಸ ಅಧ್ಯಾಯವೊಂದನ್ನು ಆರಂಭಿಸ್ತೀನಿ.

ನೊಗುಚಿ : ಹುರುಪು ಅಂದ್ರೆ ಇದು—ನಾನು, ಸಾರ್ವಜನಿಕ ಒಳ್ಳೆಯದಕ್ಕಾಗಿ ದುಡೀತೀನಿ.

ಅವರೆಲ್ಲ ಉತ್ಸಾಹದಿಂದ ಕೇಕೆ ಹಾಕಿ ಕೈಬೀಸುತ್ತಿರುವರು. ಸಮಾಧಿಪೀಠದ ಬಳಿ ಇರುವ ಕಿಮುರ ಒಬ್ಬ ಮಾತ್ರ ನಿಶ್ಚಲವಾಗಿರುವನು, ಮೌನವಾಗಿರುವನು. ಈ ದೃಶ್ಯ ಹಾಗೇ ಕರಗಿ ಹೋಗುವುದು.

ಈಗ ಚಿತ್ರದ ಆರಂಭದಲ್ಲಿದ್ದಂತೆಯೇ ಇರುವ ನಾಗರಿಕ ವಿಭಾಗದ ದೃಶ್ಯ. ಒಂದೇ ಒಂದು ಸಣ್ಣ ವ್ಯತ್ಯಾಸವೆಂದರೆ, ವಾಟನಬಿಯ ಜಾಗದಲ್ಲಿ ಒನೊ ಕುಳಿತಿರುವನು. ಸಕಾಯಿ ಗೌರವಭಾವದಿಂದ ಒಮ್ಮೆ ಸುದ್ದಿ ವಿಭಾಗದ ಕಡೆ ದೃಷ್ಟಿಬೀರಿ ಒನೊ ಬಳಿಗೆ ಬರುವನು.

ಸಕಾಯಿ : ಕ್ಷಮಿಸಿ, ಚರಂಡಿ ನೀರು ಕಿಜಾಕೀ—ಜೋ ಮೇಲೆ ತುಂಬಿ ಹರೀತಿದೆ ಅಂತಾ ಅವರು ಹೇಳ್ತಿದಾರೆ.

ಒನೊ : ಸರಿ, ಅವರನ್ನ ಲೋಕೋಪಯೋಗಿ ವಿಭಾಗಕ್ಕೆ ಕಳುಹಿಸು.

ಈಗ ಈ ಮಾತುಗಳನ್ನು ಕೇಳಿ ಕಿಮುರ ಒನೊವನ್ನು ತೀಕ್ಷ್ಣವಾಗಿ ನೋಡುತ್ತಿರುವ ದೃಶ್ಯ.

ಈಗ ಒನೊ ಕೂಡ ಅದೇ ರೀತಿ ಕಿಮುರನನ್ನು ನೋಡುತ್ತಿರುವ ದೃಶ್ಯ.

ಈಗ ಪ್ರಧಾನವಾಗಿ ಕಾಣಿಸುತ್ತಿರುವವನು ಕಿಮುರ : ಆತ ಮೇಲೆದ್ದಾಗ ಕುರ್ಚಿಯೊಂದನ್ನು ತಳ್ಳಿದ ಶಬ್ದ ; ಒನೊ ಕೂಡ ಕಿಮುರನ ಕಡೆಗೆ ತೀಕ್ಷ್ಣವಾಗಿ ನೋಡುತ್ತಿರುವನು.

ಈಗ ಕಿಮುರ, ನಿಧಾನವಾಗಿ ಕುರ್ಚಿಯೊಂದನ್ನು ಎಳೆದುಕೊಂಡು ಕುಳಿತು ಕೊಳ್ಳುವನು. ಆತ ಕುಳಿತುಕೊಂಡ ಹಾಗೆಯೇ ಕ್ಯಾಮರಾ ಕೂಡ ಅವನೊಡನೆ ಕೆಳಗೆ ಚಲಿಸುವುದು. ತನ್ನ ಡೆಸ್ಕ್ ಮೇಲಿರುವ ಕಾಗದಪತ್ರಗಳನ್ನು ಕಂಡು ಆತನ ಮುಖ ಕಪ್ಪಿಡುವುದು. ಆತ ಫೈಲುಗಳ ನಡುವೆ ಜೀವಂತವಾಗಿ ಹೂತುಹೋದವನಂತೆ ಕಾಣುತ್ತಿರುವನು.

ಈಗ ಸಕಾಯಿ ಕೌಂಟರಿನಲ್ಲಿ ಕ್ಷಮೆ ಕೋರುತ್ತಿರುವ ದೃಶ್ಯ.
ಈಗ ಪಾರ್ಕ್ ಮೇಲಿರುವ ಸೇತುವೆಯ ದೃಶ್ಯ. ಸೂರ್ಯಾಸ್ತ ಸಮಯ. ಮನೆಗೆ ಹೋಗುವ ದಾರಿಯಲ್ಲಿ ಕಿಮುರ ಆ ಸೇತುವೆಯನ್ನು ದಾಟಿ ಹೋಗುತ್ತಿರುವನು. ಸೂರ್ಯಾಸ್ತ ನೋಡಲು, ಹಾಗೇ ನಿಂತುಕೊಳ್ಳುವನು.

ಈಗ ಪಾರ್ಕ್ ದೃಶ್ಯ. ಪಾರ್ಕ್‌ನಲ್ಲಿ ಮಕ್ಕಳು ಆಟವಾಡುತ್ತಿರುವರು. ತಾಯಂದಿರು ಊಟ ಮಾಡಲು ಬನ್ನಿರೆಂದು ತಮ್ಮ ಮಕ್ಕಳನ್ನು ಕೂಗುತ್ತಿರುವರು.

ಈಗ ಕಿಮುರ ಮಕ್ಕಳನ್ನು ಗಮನಿಸುತ್ತಿರುವ ದೃಶ್ಯ. ಆತ ನೋಡುವುದನ್ನು ನಿಲ್ಲಿಸಿ, ಹಿಂದಿರುಗಿ ಹೊರಡುವನು. ಕ್ಯಾಮರಾ ಅವನೊಡನೆಯೇ ಚಲಿಸುವುದು. ಉಯ್ಯಾಲೆ ಮೇಲ್ತುದಿಯು ಕಾಣಿಸುತ್ತಿದೆ. 'ಜೀವನ ಬಲು ಕ್ಷಣಿಕ' ಎಂಬ ಹಾಡನ್ನು ಕೊಳಲಿನಲ್ಲಿ ನುಡಿಸುತ್ತಿರುವುದು ಕೇಳಿ ಬರುತ್ತಿದೆ. ಕಿಮುರ ನಡೆದು ದೂರವಾಗುವನು —ದೃಶ್ಯವೂ ಹಾಗೇ ಕರಗಿ ಹೋಗುವುದು.



## ಇಕಿರು

"ಯಾವಾಗಾದರೊಮ್ಮೆ ನಾನು ನನ್ನ ಸಾವಿನ ಬಗ್ಗೆ ಯೋಚಿಸುತ್ತೇನೆ. ಈಗ ಹೀಗೆ ಬದುಕಿರುವಾಗಲೇ, ಒಂದು ದಿನ ನಾನು ನನ್ನ ಕೊನೆಯುಸಿರು ಬಿಡಬೇಕಾಗುತ್ತದಲ್ಲ, ಅದನ್ನು ಹೇಗೆ ತಾನೇ ನಾನು ಸಹಿಸಬಲ್ಲೆ—ಎಂದು ವಿಸ್ಮಯಗೊಳ್ಳುತ್ತೇನೆ. ಈ ಬದುಕನ್ನು ಹೇಗೆ ತಾನೇ ತ್ಯಜಿಸುವುದು? ಇಲ್ಲಿ, ನಾನು ಮಾಡಬೇಕಾದ್ದು ಇನ್ನಷ್ಟೋ ರಾಶಿರಾಶಿ ಉಳಿದಿದೆಯಲ್ಲ ಎನ್ನಿಸುತ್ತದೆ; ಈತನಕವೂ ನಾನು ಬದುಕಿದ್ದು ತೀರ ಹ್ರಸ್ವ ಎನ್ನಿಸತೊಡಗುತ್ತದೆ. ಚಿಂತಿಸ ತೊಡಗುತ್ತೇನೆ. ದುಃಖವಲ್ಲ, ಚಿಂತನೆ. ಅಂಥ ಚಿಂತನೆಯ ಪ್ರಕ್ರಿಯೆಯಲ್ಲಿಯೇ **ಇಕಿರು** ಹುಟ್ಟಿಕೊಂಡದ್ದು" ಎನ್ನುತ್ತಾನೆ ಕುರಸೊವ.

ಜಗತ್‌ಶ್ರೇಷ್ಠ ನಿರ್ದೇಶಕರಲ್ಲೊಬ್ಬನಾದ ಅಕಿರ ಕುರಸವನ ಶ್ರೇಷ್ಠ ಚಿತ್ರಗಳಲ್ಲೊಂದು 'ಇಕಿರು'. ಸಾವಿನ ನೇರ ಬೆಳಕಿನಲ್ಲಿ ಬದುಕಿನ ಫಲವಿಫಲ ಗಳನ್ನು ಶೋಧಿಸಿಕೊಳ್ಳುವ ಈ ಅಸಾಧಾರಣ ಚಿತ್ರದ ಚಿತ್ರಲೇಖನ ಇಲ್ಲಿದೆ- ಕೃಷ್ಣ ಹಾಸನ ಅವರ ಸಮರ್ಥ ಕನ್ನಡ ಅನುವಾದದಲ್ಲಿ.




ಹೆಗ್ಗೋಡು ಸಾಗರ ಕರ್ನಾಟಕ